# ಹಜ್ಜ್ ಮತ್ತು ಉಮ್ರಾ ಗೈಡ್

ಡಾ. ಎಸ್. ಅಬ್ದುಲ್ ಗಫ್ಫಾರ್, ಸುಳ್ಯ

ಪರಮದಯಾಮಯ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಹಜ್ಜ್ ಇಸ್ಲಾಮಿನ ಪಂಚ ಸ್ತಂಭಗಳಲ್ಲಿ ಒಂದು ಪ್ರಮುಖ ಸ್ತಂಭ. ಈಮಾನ್ ಅಥವಾ ಸತ್ಯವಿಶ್ವಾಸವು ಇಸ್ಲಾಮಿ ಸೌಧದ ಬುನಾದಿ. ನಮಾಝ್, ಝಕಾತ್, ಉಪವಾಸ ವ್ರತ ಮತ್ತು ಹಜ್ಜ್ ಅದರ ಆಧಾರ ಸ್ತಂಭಗಳು. ಬುನಾದಿಯಿಲ್ಲದೆ ಯಾವ ಕಟ್ಟಡವೂ ನೆಲೆ ನಿಲ್ಲದು. ಅಂತೆಯೇ ಬಲಿಷ್ಠವಾದ ಆಧಾರ ಸ್ತಂಭಗಳಿಲ್ಲದೆ ಯಾವ ಕಟ್ಟಡವೂ ಕಟ್ಟಡವೆನಿಸಲು ಅರ್ಹವಾಗದು. ಇಸ್ಲಾಮ್ ಒಂದು ಸಂಪೂರ್ಣ ಜೀವನ ವ್ಯವಸ್ಥೆ. ಅದು ಮಾನವನ ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯವೇ ಮೊದಲಾದ ಜೀವನದ ಎಲ್ಲ ರಂಗಗಳಿಗೂ ಸಮಂಜಸವೂ ಸಂತುಲಿತವೂ ಸಾರ್ವಕಾಲಿಕವೂ ಆದ ಆದೇಶ-ನಿರ್ದೇಶಗಳನ್ನು ನೀಡುತ್ತದೆ. ಈ ಎಲ್ಲ ಆದೇಶಗಳ ಸಮಾಹಾರವೇ ಇಸ್ಲಾಮ್ ಎಂಬ ಭವ್ಯ ಸೌಧ. ಏಕದೇವತ್ವ, ಪ್ರವಾದಿತ್ವ ಮತ್ತು ಪರಲೋಕ ವಿಶ್ವಾಸಗಳು ಈ ಮಹಾಸೌಧದ ಅಡಿಪಾಯವಾದರೆ ನಮಾಝ್, ಝಕಾತ್, ಉಪವಾಸ ವ್ರತ ಮತ್ತು ಹಜ್ಜ್ ಅದರ ನಾಲ್ಕು ಆಧಾರ ಸ್ತಂಭಗಳು. ಈ ನಾಲ್ಕು ಆರಾಧನಾ ಕ್ರಮಗಳ ಸಮಾಹಾರವೇ ಇಸ್ಲಾಮಿನ ಇತರ ಎಲ್ಲಾ ಆದೇಶ ನಿರ್ದೇಶಗಳಿಗೆ ಒಂದು ಸುವ್ಯವಸ್ಥಿತ ಜೀವನ ವಿಧಾನದ ರೂಪ ನೀಡುವ ಶಕ್ತಿ. ಇತರ ಎಲ್ಲ ವಿಧಿ-ನಿಷೇಧಗಳನ್ನು ಅಳವಡಿಸಿ ಜೀವಿಸಲು ಮನುಷ್ಯನನ್ನು ಸಿದ್ಧಗೊಳಿಸುವ ಚಿಲುಮೆ.

ಈ ಪೈಕಿ ಹಜ್ಜ್ ಕೊನೆಯದಾದರೂ ಸಮಗ್ರವೂ ಸಾರಪೂರ್ಣವೂ ಆದ ಆರಾಧನಾ ಕ್ರಮ. ಇದರಲ್ಲಿ ನಮಾಝ್‌ನ ಭಕ್ತಿಪೂರ್ಣ ವಿಧೇಯತೆ, ಝಕಾತಿನ ತ್ಯಾಗ ಮನೋಭಾವ, ಉಪವಾಸ ವ್ರತದ ಸಂಯಮ, ತಾಳ್ಮೆಗಳು ಮೇಳೈಸಿದೆ. ಮಾತ್ರವಲ್ಲ ಇಸ್ಲಾಮಿನ ಸರ್ವೋನ್ನತ ಆರಾಧನಾ ವಿಧಾನಗಳೆನಿಸಿದ ಜಿಹಾದ್ (ದೇವಮಾರ್ಗದಲ್ಲಿ ಅವಿರತವಾದ ಹೋರಾಟ) ಹಾಗೂ ಹಿಜ್ರತ್ (ದೇವಮಾರ್ಗದಲ್ಲಿ ದೇಶ ತ್ಯಾಗ)ನ ಸ್ಫೂರ್ತಿಯೂ ಹಜ್ಜ್ ಎಂಬ ಆರಾಧನಾ ಕ್ರಮದಲ್ಲಿ ಅಡಕವಾಗಿದೆ. ಆದ್ದರಿಂದಲೇ ಪವಿತ್ರ ಕುರ್‌ಆನ್ ಹಜ್ಜ್‌ಗೆ ಬಹಳ ಮಹತ್ವ ನೀಡಿದೆ. ಆರೋಗ್ಯ ಮತ್ತು ಸಂಪತ್ತು ಇರುವ ಪ್ರತಿಯೊಬ್ಬ ಮುಸ್ಲಿಮನಿಗೆ ಅದನ್ನು ಜೀವನದಲ್ಲಿ ಒಂದು ಬಾರಿ ಕಡ್ಡಾಯಗೊಳಿಸಿದೆ. ಈ ಆಜ್ಞೆಯನ್ನು ಧಿಕ್ಕರಿಸುವವನ ಬಗ್ಗೆ ಅಲ್ಲಾಹನು ನಿರಪೇಕ್ಷನು ಎಂದು ಅದು ಸಾರಿ ಹೇಳಿದೆ. ಪ್ರವಾದಿ ಮುಹಮ್ಮದ್‌ರವರು(ಸ) ತಮ್ಮ ವಚನಗಳಲ್ಲಿಯೂ ಹಜ್ಜ್‌ಗೆ ಬಹಳಷ್ಟು ಮಹತ್ವ ನೀಡಿರುವರು. ಸಂಪತ್

ಸೌಕರ್ಯಗಳಿದ್ದೂ ಹಜ್ಜ್ ಕರ್ಮವನ್ನು ನೆರವೇರಿಸದವನು ಯಹೂದಿಯಾಗಿ ಸತ್ತರೂ ಕ್ರೈಸ್ತನಾಗಿ ಸತ್ತರೂ ಅಲ್ಲಾಹನಿಗೆ ಅದರ ಪರಿವೆ ಇಲ್ಲ ಎಂದು ಎಚ್ಚರಿಸಿರುವರು.

ಹಜ್ಜ್ ಕಡ್ಡಾಯವಾಗಿರುವ ಪ್ರತಿಯೊಬ್ಬ ಮುಸ್ಲಿಮನಿಗೂ ಆ ಬಗ್ಗೆ ಅವಶ್ಯಕವಾದ ಜ್ಞಾನವನ್ನು ಗಳಿಸುವುದು ಕಡ್ಡಾಯ. ಇಸ್ಲಾಮಿನ ಎಲ್ಲ ಆರಾಧನಾ ಕರ್ಮಗಳಂತೆ ಹಜ್ಜ್‌ಗೆ ಕೂಡಾ ಕೆಲವು ನಿಯಮ ನಿಬಂಧನೆಗಳಿವೆ. ಕೆಲವು ಆಚಾರ ಕ್ರಮವಿದೆ. ಅದನ್ನು ಹಜ್ಜ್ ನೆರವೇರಿಸುವ ಮೊದಲು ಸರಿಯಾಗಿ ಅರಿತಿರುವುದು ಅವಶ್ಯಕ.

'ಹಜ್ಜ್ ಮತ್ತು ಉಮ್ರಾ ಗೈಡ್' ಎಂಬ ಈ ಕಿರು ಹೊತ್ತಗೆಯನ್ನು ಕನ್ನಡದ ಇಸ್ಲಾಮೀ ಸಾಹಿತಿ ಮತ್ತು ಕವಿ ಅಬ್ದುಲ್ ಗಫ್ಫಾರ್, ಸುಳ್ಯ (ಮರ್ಹೂಮ್) ಅವರು ರಚಿಸಿರುವರು.

ಅಬ್ದುಲ್ ಗಫ್ಫಾರ್ ಅವರು ಹನಫೀ ಕರ್ಮಶಾಸ್ತ್ರವನ್ನು ಅವಲಂಬಿಸುವವರಾಗಿದ್ದರೂ ಈ ಕೃತಿಯಲ್ಲಿ ಹೆಚ್ಚಿನ ಅಭಿಪ್ರಾಯ ಭಿನ್ನತೆಗೆ ಎಡೆಯಿಲ್ಲದ ರೂಪದಲ್ಲಿ ಹಜ್ಜ್‌ನ ಅನುಷ್ಠಾನ ಕ್ರಮವನ್ನು ವಿವರಿಸಿದ್ದಾರೆ. ಆದ್ದರಿಂದ ಶಾಫಿಈ ಕರ್ಮಶಾಸ್ತ್ರ ಅವಲಂಬಿಗಳೂ ಇದರಿಂದ ಪೂರ್ಣ ಪ್ರಯೋಜನ ಪಡೆಯಬಹುದಾಗಿದೆ.

ಶಾಂತಿ ಪ್ರಕಾಶನ

---

# ಮುನ್ನುಡಿ

ಸುಮಾರು ನಾಲ್ಕು ಸಾವಿರ ವರ್ಷಗಳ ಹಿಂದೆ ಪ್ರವಾದಿ ಹ. ಇಬ್‌ರಾಹೀಮ್(ಅ) ಮತ್ತು ಅವರ ಸುಪುತ್ರ ಪ್ರವಾದಿ ಹ. ಇಸ್ಮಾಈಲ್‌ರು(ಅ) ಅಲ್ಲಾಹನ ಆದೇಶದಂತೆ ಕಅಬಾ ಭವನವನ್ನು ನಿರ್ಮಿಸಿ, ಅದರ ಹಜ್ಜ್ ಯಾತ್ರೆಗೆ ಸಾರ್ವತ್ರಿಕ ಕರೆ ಕೊಟ್ಟರು. ಆ ಕರೆಗೆ ಓಗೊಟ್ಟು ಜಾಗತಿಕ ಇಸ್ಲಾಮಿ ಆಂದೋಲನದ ಆ ಕೇಂದ್ರ ಸ್ಥಾನವನ್ನು ಸಂದರ್ಶಿಸಲು ಹೋಗಬೇಕೆಂದು ಬಯಸದ ಒಬ್ಬ ಮುಸ್ಲಿಮನೂ ಇರಲಾರ. ಪ್ರತಿಯೊಬ್ಬನೂ ಆ ಸುಸಂದರ್ಭ ಒದಗಿ ಬರಲೆಂದು ಕಾತರದಿಂದ ನಿರೀಕ್ಷಿಸುತ್ತಾನೆ ಮತ್ತು ಅದಕ್ಕಾಗಿ ಪ್ರಾರ್ಥಿಸುತ್ತಾನೆ.

ಅಲ್ಲಾಹನ ಅನುಗ್ರಹದಿಂದ ಈ ಸದವಕಾಶ ಸಿಕ್ಕಿದೊಡನೆ ಆತ ಪತ್ನಿ-ಮಕ್ಕಳು ನೆಂಟರಿಷ್ಟರು ಮತ್ತು ಆಪ್ತ ಸ್ನೇಹಿತರಿಂದ ಬೀಳ್ಕೊಂಡು ವ್ಯಾಪಾರ ವಹಿವಾಟುಗಳನ್ನು ಮನೆಮಾರುಗಳನ್ನು ಬಿಟ್ಟು ತೌಹೀದ್ ಮತ್ತು ಅಲ್ಲಾಹನ ಪ್ರೀತಿಯಿಂದ ಪ್ರಮತ್ತನಾಗಿ ಆ ಪ್ರಾಚೀನ ದೇವ ಭವನಕ್ಕೆ ಪ್ರದಕ್ಷಿಣೆ ಬರಲಿಕ್ಕಾಗಿ ಹೊರಟು ಬಿಡುತ್ತಾನೆ. ಅಲ್ಲಿ ಅವನ ಲಕ್ಷಾಂತರ ಸ್ವಧರ್ಮೀಯ ಸಹೋದರ ಸಹೋದರಿಯರು ಜಗತ್ತಿನ ಮೂಲೆ ಮೂಲೆಗಳಿಂದ ಅವನ ಹಾಗೆಯೇ ಬಂದು ಕಾಯುತ್ತಿರುತ್ತಾರೆ. ವರ್ಣ, ವಸ್ತ್ರ, ಭಾಷೆ, ಜನಾಂಗ, ವರ್ಗ, ಜಾತಿ ಮೊದಲಾದ ಎಲ್ಲ ಭೇದಭಾವಗಳು ಅಳಿದು ಹೋಗಿವೆ. ಸಾಮಾನ್ಯ ಹರಳು ಕಲ್ಲುಗಳು ವಜ್ರಗಳಾಗಿ ಮಾರ್ಪಟ್ಟಿವೆಯೋ ಎಂಬಂತಿದೆ ಆ ಜನ ಸಾಗರ. ಅಖಿಲ ಭೂಮಂಡಲವು ಒಂದೇ ಕೇರಿಯಲ್ಲಿ ಒಟ್ಟಾಗಿದೆ. ಮುಂದೆ ಕಅಬಾ ಭವನವು ಅತ್ಯಂತ ಘನತೆ-ಗಾಂಭೀರ್ಯಗಳಿಂದ ನಿಂತಿದೆ. ಕೆಲವರು ಹಜರುಲ್ ಅಸ್ವದನ್ನು ಚುಂಬಿಸಲು ಪ್ರಯತ್ನಿಸುತ್ತಿದ್ದಾರೆ. ಕೆಲವರು ದೇವ ವ್ಯಾಮೋಹ ಪರವಶವಾಗಿ ಪ್ರದಕ್ಷಿಣೆ ಬರುತ್ತಿದ್ದಾರೆ. ಕೆಲವರು ಬಾಗಿದ್ದಾರೆ. ಕೆಲವರು ಸಾಷ್ಟಾಂಗವೆರಗಿದ್ದಾರೆ. ಕೆಲವರು ಮುಲ್ತಝಿಮನ್ನು ಅಪ್ಪಿ ಹಿಡಿದು ಮೈಮರೆತು ನಿಂತವರಂತೆ ಕಾಣುತ್ತಾರೆ. ಕಣ್ಣುಗಳಿಂದ ಅಶ್ರುಧಾರೆಗಳು ಇಳಿಯುತ್ತಿವೆ. ತುಟಿಗಳು ನಡುಗುತ್ತಿವೆ. ಹೃದಯಗಳು ಕಂಪಿಸುತ್ತಿವೆ. ಹಜರುಲ್ ಅಸ್ವದ್‌ನ ಸಮ್ಮೋಹ, ಮಕಾಮ್ ಇಬ್‌ರಾಹೀಮ್‌ನ ಬಳಿ ಎರಡು ರಕಅತ್ ನಮಾಝ್, ಝಮ್‌ಝಮ್ ನೀರುಸೇವನೆ, ಸಫಾ-ಮರ್ವಾಗಳ ನಡುವಣ ಓಡಾಟ, ಪ್ರಾರ್ಥನೆಗಳು, ಪರಿತಾಪಗಳು, ಕ್ಷಮಾಯಾಚನೆಗಳು, ಜಪಗಳು, ಪಠಣಗಳು, ಸ್ತುತಿ ಸ್ತೋತ್ರಗಳು, ಮಿನಾಕ್ಕೆ ರವಾನೆ, ಅರಫಾತ್ ಮತ್ತು ಮುಝ್ದಲಿಫಾಗಳಲ್ಲಿ ವುಕೂಫ್, ಅಲ್ಲಿ ದುಆಗಳು, ಮಿನಾದಲ್ಲಿ ಶಪಿತ ಶೈತಾನನಿಗೆ ಕಲ್ಲೆಸೆತ, ದೇವ ಮಾರ್ಗದಲ್ಲಿ ಪ್ರಾಣಿ ಬಲಿ, ದೇವಾದೇಶಗಳ ಅನುಸರಣೆಯ ಸರಣಿಗಳು- ಇವೆಲ್ಲದಕ್ಕೂ ಪಾಪಗಳಿಗೆ ಕ್ಷಮೆಯ ಸುವಾರ್ತೆಯೇ ಪ್ರೇರಣೆ.

ಕರುಣಾನಿಧಿಯಾದ ಅಲ್ಲಾಹನ ದಯಾಸಾಗರವೇ ಉಕ್ಕೇರಿ ಪಶ್ಚಾತ್ತಾಪಗಳು ಸ್ವೀಕರಿಸಲ್ಪಟ್ಟವು. ಪಾಪಿಗಳು ಕ್ಷಮಿಸಲ್ಪಟ್ಟರು. ಈಗ ತಾನೇ ಜನಿಸಿದ ನಿರ್ದೋಷಿ ಶಿಶುಗಳಂತೆ ನಿಶ್ಕಲ್ಮಶರಾಗಿ, ಶುದ್ಧರಾಗಿ "ಹಜ್ಜ್ ಮಬ್‌ರೂರ್"ನ ಅನುಗ್ರಹ ಪ್ರಾಪ್ತಿಯೊಂದಿಗೆ ಹಾಯಾಗಿ ತಮ್ಮ ತಮ್ಮ ನಾಡುಗಳಿಗೆ ಮರಳುತ್ತಾರೆ. ಇಂತಹ ಹಜ್ಜ್ ಯಾತ್ರೆಯ ಅನುಗ್ರಹ ಹೊಂದಬೇಕೆಂಬ ಆಕಾಂಕ್ಷೆ ಮತ್ತು ಅಮಿತೋತ್ಸಾಹ ಇಲ್ಲದವರಾರು? ಇದು ಹಜ್ಜ್ ಯಾತ್ರೆ. ಹೃದಯವಂತರ ಹಬ್ಬ. ವಿದ್ಯಾವಂತರ ತರಬೇತಿ ಸ್ಥಳ. ಇದು ಇಬಾದತ್ ಆಗಿರುವುದಂತೂ ಮುಖ್ಯ. ಅದರೊಂದಿಗೇ ಇದು ಪ್ರವಾಸ, ವ್ಯಾಪಾರ, ಶಿಕ್ಷಣ, ತರಬೇತಿ, ಧರ್ಮಪ್ರಸಾರ, ಸಂದರ್ಶನ, ಪ್ರೇಮ, ಪರಸ್ಪರ ಪರಿಚಯ, ಭೇಟಿ ಎಲ್ಲವೂ ಆಗಿದೆ.

ಈ ವರೆಗೂ ಇದರ ಅನುಗ್ರಹ ಪ್ರಾಪ್ತಿಯಾಗದವರ ಮನಸ್ಸು ಕಾತರಗೊಳ್ಳುತ್ತಿದೆ. ಹಿಂದೆ ಇದರ ಅನುಗ್ರಹ ಹೊಂದಿದವರ ಮನಸ್ಸು ಪುನರಪಿ ಅದಕ್ಕಾಗಿ ಚಡಪಡಿಸುತ್ತಿದೆ. ಅಲ್ಲಾಹನು ಎಲ್ಲರ ಇಷ್ಟಾರ್ಥಗಳನ್ನು ಪೂರೈಸಿ ಕೊಡಲಿ. ಚಡಪಡಿಸುತ್ತಿರುವ ಹೃದಯ ಗಳಿಗೆ ತನ್ನ ಗೃಹದ ಸಂದರ್ಶನದ ಮೂಲಕ ಶಾಂತಿ ನೆಮ್ಮದಿಗಳನ್ನು ದಯಪಾಲಿಸಲಿ.

ಹಜ್ಜ್ ಯಾತ್ರೆಯು ಒಂದು ಇಬಾದತ್. ಇದರ ಸಂಪೂರ್ಣ ಪುಣ್ಯಫಲ ಸಿಗಬೇಕಾದರೆ ಇದು ಧರ್ಮ ಶಾಸ್ತ್ರೋಕ್ತವಾಗಿ ನೆರವೇರಬೇಕಾದುದು ಅಗತ್ಯ. ಹಾಗಾಗಬೇಕಾದರೆ ಅದರ ವಿಧಿ ನಿಯಮಗಳೆಲ್ಲ ತಿಳಿದಿರಬೇಕು. ಇವುಗಳನ್ನು ಕಲಿಸಿಕೊಡುವಂತಹ ಗ್ರಂಥಗಳು ಅನೇಕ ಭಾಷೆಗಳಲ್ಲಿ ಲಭ್ಯವಿದೆ. ಕನ್ನಡ ಭಾಷೆಯಲ್ಲಿ ಇಂತಹ ಪುಸ್ತಕಗಳು ವಿರಳ.

ನನ್ನ ಜ್ಞಾನ ಮತ್ತು ಅನುಭವಗಳ ಕೊರತೆಯ ಅರಿವು ನನಗೆ ಚೆನ್ನಾಗಿದೆ. ಆದರೂ ಅಲ್ಲಾಹನ ನಾಮದೊಂದಿಗೆ ಈ ಕಾರ್ಯಕ್ಕೆ ಧುಮುಕಿದೆ. ಕೆಲವು ಗ್ರಂಥಗಳ ಸಹಾಯದಿಂದಲೂ ನನ್ನ ಸ್ವಅನುಭವದಿಂದಲೂ ಇದನ್ನು ಸಿದ್ಧಪಡಿಸಿದೆ.

ಈ ಕೈಪಿಡಿಯಿಂದ ಪ್ರಯೋಜನ ಪಡೆದವರು ತಾವು ನಡೆಸುವ ಹಜ್ಜ್ ಯಾತ್ರೆಗಳಲ್ಲಿ ಪ್ರಾರ್ಥನೆಗಳು ಸ್ವೀಕೃತವಾಗುವ ಎಲ್ಲ ಸ್ಥಳಗಳಲ್ಲೂ ಇತರ ಪ್ರಾರ್ಥನೆಗಳಲ್ಲೂ ಈ ಯಕಃಶ್ಚಿತ್ ದಾಸನನ್ನು ಮರೆಯದೆ, ಅವನ ಇಹ ಪರಗಳ ಶ್ರೇಯಸ್ಸಿಗಾಗಿ ದುಆ ಮಾಡುತ್ತಿರಬೇಕೆಂದು ಕಳಕಳಿಯಿಂದ ಕೇಳಿ ಕೊಳ್ಳುತ್ತೇನೆ. ಅಲ್ಲಾಹನು ನನ್ನ ಕಿಂಚಿತ್ ಪರಿಶ್ರಮವನ್ನು ಸ್ವೀಕರಿಸಲಿ ಎಂದೂ ಪ್ರಾರ್ಥಿಸುವ

ಡಾ. ಎಸ್. ಅಬ್ದುಲ್ ಗಫ್ಫಾರ್, ಸುಳ್ಯ

# ಅನುಕ್ರಮಣಿಕೆ

## ಹಜ್ಜ್ ನಿರ್ವಹಣೆ





# ಹಜ್ಜ್

ಹಜ್ಜ್ ಎಂಬುದು ಇಸ್ಲಾಮಿನ ಐದನೆಯ ಆಧಾರಸ್ತಂಭವೆಂಬುದು ಮುಸ್ಲಿಮರಿಗೆಲ್ಲ ತಿಳಿದಿದೆ. ನಮಾಝ್ ಮತ್ತು ಉಪವಾಸ ವ್ರತಗಳು ಶಾರೀರಿಕ ಇಬಾದತ್‌ಗಳಾಗಿವೆ. ಝಕಾತ್ ಸಾಂಪತ್ತಿಕ ಇಬಾದತ್. ಆದರೆ ಹಜ್ಜ್ ಎಂಬುದು ಶಾರೀರಿಕವೂ ಸಾಂಪತ್ತಿಕವೂ ಆದ ಇಬಾದತ್ ಆಗಿದೆ. ಇದರಲ್ಲಿ ಶರೀರ ಮತ್ತು ಸಂಪತ್ತಿನೊಂದಿಗೆ ಜಿಹಾದ್ ಮತ್ತು ಹಿಜ್ರತ್‌ನ ಗುಣವಿಶೇಷಗಳೂ ಅಡಗಿವೆ. ಇಸ್ಲಾಮಿನೊಂದಿಗೆ ಆಸಕ್ತಿ, ತ್ಯಾಗ, ಬಲಿದಾನದ ಭಾವಗಳು ತುಂಬಿವೆ. ಹಾಜಿಯು (ಹಜ್ಜ್ ನಿರ್ವಹಿಸುವವನು) ವಿದ್ಯಾವಂತನಿರಲಿ, ಅವಿದ್ಯಾವಂತನಿರಲಿ, ಚಕ್ರಾಧಿಪತಿಯಾಗಿರಲಿ ಸಾಮಾನ್ಯ ಪ್ರಜೆಯಾಗಿರಲಿ, ಕರಿಯನಿರಲಿ, ಬಿಳಿಯನಿರಲಿ, ಯಾವ ದೇಶದವನೇ ಆಗಿರಲಿ, ಯಾವ ಭಾಷೆಯನ್ನಾಡುವವನೇ ಆಗಿರಲಿ, ಯಾವ ದಿಸೆಯವನೇ ಇರಲಿ, ಏಕಪ್ರಕಾರವಾಗಿ ಅಲ್ಲಾಹನ ಅತಿಥಿಯಾಗಿರುತ್ತಾನೆ. ಅವನ ಕೃಪಾ ಕಟಾಕ್ಷಕ್ಕೆ ಅರ್ಹನಾಗಿರುತ್ತಾನೆ.

## ಹಜ್ಜ್‌ನ ಕುರಿತು ಅಲ್ಲಾಹನ ಆಜ್ಞೆ

وَلِلَّهِ عَلَى ٱلنَّاسِ حِجُّ ٱلْبَيْتِ مَنِ ٱسْتَطَاعَ إِلَيْهِ سَبِيلًا ۚ وَمَن كَفَرَ فَإِنَّ ٱللَّهَ غَنِىٌّ
عَنِ ٱلْعَٰلَمِينَ

"ಈ ಭವನದ ವರೆಗೆ ತಲುಪಲು ಸಾಧನಾನುಕೂಲತೆಗಳಿರುವವನು ಅದರ "ಹಜ್ಜ್" ಯಾತ್ರೆ ಕೈಗೊಳ್ಳಬೇಕೆಂಬುದು ಜನರ ಮೇಲೆ ಅಲ್ಲಾಹನ ಹಕ್ಕಾಗಿರುತ್ತದೆ. ಈ ಆಜ್ಞೆಯ ಅನುಸರಣೆಯನ್ನು ಯಾರಾದರೂ ನಿರಾಕರಿಸಿದರೆ, ಅಲ್ಲಾಹನು ಸಕಲ ಜಗತ್ತಿನವರಿಂದ ನಿರಪೇಕ್ಷನಾಗಿರುತ್ತಾನೆಂಬುದನ್ನು ಅವನು ಅರಿತಿರಬೇಕು."

(ಪವಿತ್ರ ಕುರ್‌ಆನ್, 3:97)

## ಹಜ್ಜ್‌ಗೆ ಕರೆ:

وَأَذِّنْ فِي النَّاسِ بِالْحَجِّ يَأْتُوكَ رِجَالًا وَعَلَىٰ كُلِّ ضَامِرٍ يَأْتِينَ مِن كُلِّ
فَجٍّ عَمِيقٍ ﴿٢٧﴾ لِّيَشْهَدُوا مَنَافِعَ لَهُمْ وَيَذْكُرُوا اسْمَ اللَّهِ فِي أَيَّامٍ
مَّعْلُومَاتٍ عَلَىٰ مَا رَزَقَهُم مِّن بَهِيمَةِ الْأَنْعَامِ ۖ فَكُلُوا مِنْهَا وَأَطْعِمُوا
الْبَائِسَ الْفَقِيرَ ﴿٢٨﴾ ثُمَّ لْيَقْضُوا تَفَثَهُمْ وَلْيُوفُوا نُذُورَهُمْ وَلْيَطَّوَّفُوا
بِالْبَيْتِ الْعَتِيقِ ﴿٢٩﴾

"ಮತ್ತು ಜನರಿಗೆ ಹಜ್ಜ್ ಯಾತ್ರೆಗಾಗಿ ಸಾರ್ವತ್ರಿಕ ಕರೆ ನೀಡಿರಿ. ಅವರು ದೂರ ದೂರದ ಪ್ರದೇಶಗಳಿಂದೆಲ್ಲ ಕಾಲ್ನಡಿಗೆಯಲ್ಲೂ ಒಂಟೆಗಳ ಮೇಲೆ ಸವಾರಿ ಮಾಡಿಕೊಂಡೂ ನಿಮ್ಮ ಬಳಿಗೆ ಬರುವಂತಾಗಲಿ. (ಈ ರೀತಿ) ಅವರು ಇಲ್ಲಿ ಅವರಿಗಾಗಿ ಇರಿಸಲಾಗಿರುವ ಪ್ರಯೋಜನಗಳನ್ನು ಪ್ರತ್ಯಕ್ಷವಾಗಿ ನೋಡುವಂತಾಗಲಿ ಮತ್ತು ಅವರು ಕೆಲವು ನಿಶ್ಚಿತ ದಿನಗಳಲ್ಲಿ ಅಲ್ಲಾಹನು ಅವರಿಗೆ ದಯಪಾಲಿಸಿರುವ ಜಾನುವಾರುಗಳ ಮೇಲೆ ಅವನ ನಾಮವನ್ನುಚ್ಚರಿಸಲಿ. ಸ್ವತಃ ತಿನ್ನಲಿ ಮತ್ತು ಬಡಬಗ್ಗರಿಗೂ ಕೊಡಲಿ. ಆ ಬಳಿಕ ತಮ್ಮ ಕೊಳೆ-ಕಶ್ಮಲಗಳನ್ನು ಹೋಗಲಾಡಿಸಲಿ. ತಮ್ಮ ಹರಕೆಗಳನ್ನು ಸಲ್ಲಿಸಲಿ ಮತ್ತು ಈ ಪುರಾತನ ಭವನಕ್ಕೆ ಪ್ರದಕ್ಷಿಣೆ ಮಾಡಲಿ." (ಪವಿತ್ರ ಕುರ್‌ಆನ್, 22:27-29)

## ಹಜ್ಜ್‌ನ ವಿವರಣೆ

وَأَتِمُّوا الْحَجَّ وَالْعُمْرَةَ لِلَّهِ ۚ فَإِنْ أُحْصِرْتُمْ فَمَا اسْتَيْسَرَ مِنَ الْهَدْيِ ۖ وَلَا تَحْلِقُوا
رُءُوسَكُمْ حَتَّىٰ يَبْلُغَ الْهَدْيُ مَحِلَّهُ ۚ فَمَن كَانَ مِنكُم مَّرِيضًا أَوْ بِهِ أَذًى مِّن
رَّأْسِهِ فَفِدْيَةٌ مِّن صِيَامٍ أَوْ صَدَقَةٍ أَوْ نُسُكٍ ۚ فَإِذَا أَمِنتُمْ فَمَن تَمَتَّعَ بِالْعُمْرَةِ
إِلَى الْحَجِّ فَمَا اسْتَيْسَرَ مِنَ الْهَدْيِ ۚ فَمَن لَّمْ يَجِدْ فَصِيَامُ ثَلَاثَةِ أَيَّامٍ فِي الْحَجِّ وَ
سَبْعَةٍ إِذَا رَجَعْتُمْ ۗ تِلْكَ عَشَرَةٌ كَامِلَةٌ ۗ ذَٰلِكَ لِمَن لَّمْ يَكُنْ أَهْلُهُ حَاضِرِي الْمَسْجِدِ
الْحَرَامِ ۚ وَاتَّقُوا اللَّهَ وَاعْلَمُوا أَنَّ اللَّهَ شَدِيدُ الْعِقَابِ ﴿١٩٦﴾

"ಅಲ್ಲಾಹನ ಸಂತುಷ್ಟಿಗಾಗಿ 'ಹಜ್ಜ್' ಮತ್ತು 'ಉಮ್ರಾ'ಗಳ ಸಂಕಲ್ಪ ಮಾಡಿದಾಗ ಅದನ್ನು ಪೂರ್ತಿಗೊಳಿಸಿರಿ. ನೀವೆಲ್ಲಾದರೂ ಸುತ್ತುವರಿಯಲ್ಪಟ್ಟಾಗ ನಿಮಗೊದಗಿರುವ ಬಲಿಯನ್ನು ಅಲ್ಲಾಹನ ಸನ್ನಿಧಿಗೆ ಅರ್ಪಿಸಿರಿ ಮತ್ತು ಬಲಿಯು ತನ್ನ ಸ್ಥಾನವನ್ನು ತಲಪುವ ತನಕ ನಿಮ್ಮ ತಲೆ ಬೋಳಿಸಬೇಡಿರಿ. ಆದರೆ ರೋಗಿಯಾಗಿರುವ ಅಥವಾ ಶಿರೋಬಾಧೆಯ ಕಾರಣದಿಂದ ತಲೆ ಬೋಳಿಸಿಕೊಂಡಾತನು ಪ್ರಾಯಶ್ಚಿತ್ತ ರೂಪದಲ್ಲಿ ಉಪವಾಸಗಳನ್ನಾಚರಿಸಬೇಕು ಅಥವಾ ದಾನ ಕೊಡಬೇಕು ಅಥವಾ ಬಲಿಯರ್ಪಿಸಬೇಕು. ಅನಂತರ ನಿಮಗೆ ನೆಮ್ಮದಿಯೊದಗಿದಾಗ, (ಮತ್ತು ನೀವು ಹಜ್ಜ್‌ಗಿಂತ ಮುಂಚಿತವಾಗಿ ಮಕ್ಕಾ ತಲುಪಿದರೆ) 'ಹಜ್ಜ್'ನ ಕಾಲ ಬರುವ ತನಕ 'ಉಮ್ರಾ'ದಿಂದ ಫಲಪಡೆಯುವಾತನು ತನ್ನ ಶಕ್ತ್ಯಾನುಸಾರ ಬಲಿಯನ್ನರ್ಪಿಸಬೇಕು. ಬಲಿಯೊದಗದಿದ್ದರೆ, ಮೂರು ದಿನಗಳ ಉಪವಾಸವನ್ನು 'ಹಜ್ಜ್' ಕಾಲದಲ್ಲಿಯೂ ಏಳು ದಿನಗಳ ಉಪವಾಸವನ್ನು ಸ್ವಗೃಹಕ್ಕೆ ತಲುಪಿದ ಬಳಿಕವೂ, ಹೀಗೆ ಹತ್ತು ದಿನಗಳ ಉಪವಾಸವನ್ನು ಪೂರ್ತಿಯಾಗಿ ಆಚರಿಸಬೇಕು. ಈ ರಿಯಾಯಿತಿಯು ಮಸ್ಜಿದುಲ್ ಹರಾಮ್‌ನ ಸಮೀಪದ ನಿವಾಸಿಗಳಲ್ಲದವರಿಗಾಗಿದೆ. ಅಲ್ಲಾಹನ ಈ ಆಜ್ಞೆಗಳನ್ನು ಉಲ್ಲಂಘಿಸದಿರಿ. ಅಲ್ಲಾಹನು ಕಠಿಣವಾಗಿ ಶಿಕ್ಷಿಸುವವನೆಂಬುದನ್ನು ನೀವು ಚೆನ್ನಾಗಿ ತಿಳಿದಿರಬೇಕು." (ಪವಿತ್ರ ಕುರ್‌ಆನ್, 2:196)

اَلْحَجُّ اَشْهُرٌ مَّعْلُوْمٰتٌ ۚ فَمَنْ فَرَضَ فِيْهِنَّ الْحَجَّ فَلَا رَفَثَ وَلَا فُسُوْقَ ۙ وَلَا جِدَالَ
فِي الْحَجِّ ؕ وَمَا تَفْعَلُوْا مِنْ خَيْرٍ يَّعْلَمْهُ اللّٰهُ ؕ وَتَزَوَّدُوْا فَاِنَّ خَيْرَ الزَّادِ
التَّقْوٰى ۫ وَاتَّقُوْنِ يٰاُولِي الْاَلْبَابِ ﴿١٩٧﴾ لَيْسَ عَلَيْكُمْ جُنَاحٌ اَنْ تَبْتَغُوْا فَضْلًا مِّنْ
رَّبِّكُمْ ؕ فَاِذَآ اَفَضْتُمْ مِّنْ عَرَفٰتٍ فَاذْكُرُوا اللّٰهَ عِنْدَ الْمَشْعَرِ الْحَرَامِ ۪ وَاذْكُرُوْهُ كَمَا هَدٰىكُمْ ۚ
وَاِنْ كُنْتُمْ مِّنْ قَبْلِهٖ لَمِنَ الضَّآلِّيْنَ ﴿١٩٨﴾ ثُمَّ اَفِيْضُوْا مِنْ حَيْثُ اَفَاضَ النَّاسُ وَ
اسْتَغْفِرُوا اللّٰهَ ؕ اِنَّ اللّٰهَ غَفُوْرٌ رَّحِيْمٌ ﴿١٩٩﴾ فَاِذَا قَضَيْتُمْ مَّنَاسِكَكُمْ فَاذْكُرُوا اللّٰهَ
كَذِكْرِكُمْ اٰبَآءَكُمْ اَوْ اَشَدَّ ذِكْرًا ؕ فَمِنَ النَّاسِ مَنْ يَّقُوْلُ رَبَّنَآ اٰتِنَا فِي الدُّنْيَا
وَمَا لَهٗ فِي الْاٰخِرَةِ مِنْ خَلَاقٍ ﴿٢٠٠﴾ وَمِنْهُمْ مَّنْ يَّقُوْلُ رَبَّنَآ اٰتِنَا فِي الدُّنْيَا حَسَنَةً
وَّفِي الْاٰخِرَةِ حَسَنَةً وَّقِنَا عَذَابَ النَّارِ ﴿٢٠١﴾ اُولٰٓئِكَ لَهُمْ نَصِيْبٌ مِّمَّا كَسَبُوْا ؕ وَاللّٰهُ

سَرِيْعُ الْحِسَابِ ﴿٢٠٢﴾ وَاذْكُرُوا اللّٰهَ فِيْٓ اَيَّامٍ مَّعْدُوْدٰتٍ ۭ فَمَنْ تَعَجَّلَ فِيْ يَوْمَيْنِ فَلَآ اِثْمَ عَلَيْهِ ۚ وَمَنْ تَاَخَّرَ فَلَآ اِثْمَ عَلَيْهِ ۙ لِمَنِ اتَّقٰى ۭ وَاتَّقُوا اللّٰهَ وَاعْلَمُوْٓا اَنَّكُمْ اِلَيْهِ تُحْشَرُوْنَ ﴿٢٠٣﴾

"ಹಜ್ಜ್‌ನ ತಿಂಗಳುಗಳು ಎಲ್ಲರಿಗೂ ತಿಳಿದಿವೆ. ಈ ನಿಶ್ಚಿತ ತಿಂಗಳುಗಳಲ್ಲಿ ಹಜ್ಜ್‌ನ ಸಂಕಲ್ಪ ಮಾಡುವಾತನು ಹಜ್ಜ್ ಕಾಲಾವಧಿಯಲ್ಲಿ ಯಾವುದೇ ಕಾಮಾಪೇಕ್ಷೆಯ, ದುರಾಚಾರದ ಮತ್ತು ಕಲಹದ ಕಾರ್ಯಗಳು ತನ್ನಿಂದ ಸಂಭವಿಸದಂತೆ ಜಾಗರೂಕ ನಾಗಿರಬೇಕು. ನೀವು ಯಾವ ಸತ್ಕಾರ್ಯಗಳನ್ನು ಮಾಡಿದರೂ ಅದು ಅಲ್ಲಾಹನ ಅರಿವಿನಲ್ಲಿರು ವುದು. ಹಜ್ಜ್ ಯಾತ್ರೆಗೆ ಹೋಗುವಾಗ ದಾರಿವೆಚ್ಚವನ್ನು ಕೊಂಡು ಹೋಗಿರಿ. ಅತ್ಯುತ್ತಮ ದಾರಿವೆಚ್ಚವು ಧರ್ಮನಿಷ್ಠೆ ಆಗಿರುತ್ತದೆ. ಆದುದರಿಂದ ಓ ಬುದ್ಧಿಜೀವಿಗಳೇ! ನನ್ನ ಆಜ್ಞೋಲ್ಲಂಘನೆಯಿಂದ ದೂರವಿರಿ.

ನೀವು ಹಜ್ಜ್ ಯಾತ್ರೆಯ ಜೊತೆಯಲ್ಲೇ ನಿಮ್ಮ ಪ್ರಭುವಿನ ಅನುಗ್ರಹವನ್ನರಸುತ್ತ ಹೋಗುವುದರಲ್ಲೇನೂ ಅಡ್ಡಿಯಿಲ್ಲ. ನೀವು 'ಅರಫಾ'ದಿಂದ ಹೊರಟು 'ಮಶ್‌ಅರುಲ್ ಹರಾಮ್'(ಮುಝ್ದಲಿಫಾ)ನ ಬಳಿ ತಂಗಿ ಅಲ್ಲಾಹನನ್ನು ಸ್ಮರಿಸಿರಿ. ಆತನು ನಿಮಗೆ ಮಾರ್ಗದರ್ಶನ ಮಾಡಿದ ರೀತಿಯಲ್ಲೇ ಸ್ಮರಿಸಿರಿ. ಇದಕ್ಕೆ ಮುಂಚೆ ನೀವು ಪಥಭ್ರಷ್ಟ ರಾಗಿದ್ದಿರಿ. ಆ ಬಳಿಕ ಇತರರೆಲ್ಲರೂ ಮರಳುವಲ್ಲಿಂದಲೇ ನೀವೂ ಮರಳಿರಿ ಮತ್ತು ಅಲ್ಲಾಹನಿಂದ ಕ್ಷಮೆ ಯಾಚಿಸಿರಿ. ನಿಶ್ಚಯವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

ಹೀಗೆ ನೀವು ಹಜ್ಜ್‌ನ ವಿಧಿ ವಿಧಾನಗಳನ್ನು ನಿರ್ವಹಿಸಿದ ಬಳಿಕ, ಹಿಂದೆ ನೀವು ಪೂರ್ವಿಕರನ್ನು ಸ್ಮರಿಸುತ್ತಿದ್ದಂತೆಯೇ ಅಲ್ಲಾಹನನ್ನು ಸ್ಮರಿಸಿರಿ, ಮಾತ್ರವಲ್ಲ ಅದಕ್ಕಿಂತಲೂ ಅಧಿಕವಾಗಿ ಸ್ಮರಿಸಿರಿ. (ಆದರೆ, ಅಲ್ಲಾಹನನ್ನು ಸ್ಮರಿಸುವವರಲ್ಲೂ ತುಂಬಾ ತಾರತಮ್ಯವಿದೆ.) ಅವರಲ್ಲಿ ಕೆಲವರು, "ಓ ನಮ್ಮ ಪ್ರಭೂ! ನಮಗೆ ಇಹಲೋಕದಲ್ಲೇ ಎಲ್ಲವನ್ನೂ ಕೊಟ್ಟುಬಿಡು" ಎನ್ನುವವರಿದ್ದಾರೆ. ಇಂತಹವರಿಗೆ ಪರಲೋಕದಲ್ಲಿ ಯಾವ ಪಾಲೂ ಇಲ್ಲ. ಇನ್ನು ಕೆಲವರು, "ಓ ನಮ್ಮ ಪ್ರಭೂ! ನಮಗೆ ಇಹಲೋಕದಲ್ಲಿಯೂ ಒಳಿತನ್ನು ದಯಪಾಲಿಸು ಪರಲೋಕದಲ್ಲಿಯೂ ಒಳಿತನ್ನು ದಯಪಾಲಿಸು ಮತ್ತು ನಮ್ಮನ್ನು ಅಗ್ನಿಯಾತನೆಯಿಂದ ರಕ್ಷಿಸು" ಎನ್ನುವವರೂ ಇದ್ದಾರೆ. ಇಂತಹವರು ತಮ್ಮ ದುಡಿಮೆಗನುಸಾರವಾಗಿ (ಇಕ್ಕಡೆ ಗಳಲ್ಲೂ) ಪಾಲು ಪಡೆಯುವರು. ಅಲ್ಲಾಹನು ಲೆಕ್ಕ ತೀರಿಸುವುದರಲ್ಲಿ ಅತಿ ಶೀಘ್ರ ನಾಗಿರುತ್ತಾನೆ. ನೀವು ಅಲ್ಲಾಹನ ಧ್ಯಾನದಲ್ಲಿ ಕಳೆಯಬೇಕಾಗಿರುವ ಎಣಿಕೆಯ ಕೆಲವು ದಿನಗಳಿವು. ಯಾವನಾದರೂ ಲಗುಬಗೆಯಿಂದ ಎರಡೇ ದಿನಗಳಲ್ಲಿ ಮರಳಿದರೂ ಏನೂ ದೋಷವಿಲ್ಲ. ಇನ್ನಾವನಾದರೂ ಸ್ವಲ್ಪ ಹೆಚ್ಚು ಕಾಲ ನಿಂತು ಮರಳಿದರೂ ಏನೂ ದೋಷವಿಲ್ಲ.

ಇದು ಈ ದಿನಗಳನ್ನು ಧರ್ಮನಿಷ್ಠೆಯಲ್ಲಿ ಕಳೆದಿದ್ದರೆ ಮಾತ್ರ. ಅಲ್ಲಾಹನ ಅವಿಧೇಯತೆಯಿಂದ ದೂರವಿರಿ. ಒಂದು ದಿನ ಅವನ ಸನ್ನಿಧಿಯಲ್ಲಿ ನಿಮಗೆ ಹಾಜರಾಗಲಿದೆ ಯೆಂಬುದನ್ನು ಚೆನ್ನಾಗಿ ಅರಿತುಕೊಳ್ಳಿರಿ." (ಪವಿತ್ರ ಕುರ್‌ಆನ್, 2:197-203)

ಅಲ್ಲಾಹನ ಭವನ(ಕಅಬಾ) ನಿರ್ಮಿಸಿ ಆದ ಬಳಿಕ ಅದರ ನಿರ್ಮಾತೃ ಹ. ಇಬ್‌ರಾಹೀಮ್‌ರು(ಅ) ಮಕಾಮು ಇಬ್‌ರಾಹೀಮ್‌ನ ಮೇಲೆ ನಿಂತು ಕೊಟ್ಟ ಪ್ರಥಮ ಆಹ್ವಾನ-

"ಹೇ ಜನರೇ, ನಿಮ್ಮ ಪ್ರಭು ಒಂದು ಭವನವನ್ನು ನಿರ್ಮಿಸುತ್ತಾನೆ. ಅದರ ಹಜ್ಜ್ ಯಾತ್ರೆ ಕೈಗೊಳ್ಳಿರಿ." (ತಫ್ಸೀರ್ ಇಬ್ನ್ ಕಸೀರ್, ಭಾಗ-4)

## ಹಜ್ಜ್ ಮತ್ತು ಉಮ್ರಾದ ಬಗ್ಗೆ ಪ್ರವಾದಿವರ್ಯರ(ಸ) ವಚನಗಳು

ಈಮಾನ್ ಮತ್ತು ಜಿಹಾದ್‌ನ ಬಳಿಕ ಅತ್ಯುತ್ತಮ ಕರ್ಮ ಹಜ್ಜ್ ಮಬ್‌ರೂರ್ ಆಗಿದೆ. (ಬುಖಾರಿ, ಮುಸ್ಲಿಮ್)

ಅಲ್ಲಾಹನಿಗಾಗಿ ಹಜ್ಜ್ ಯಾತ್ರೆ ಮಾಡಿ, ಅದರಲ್ಲಿ ಸ್ತ್ರೀ ಸಂಸರ್ಗ, ಕಾಮ ಪ್ರಚೋದಕ ಕರ್ಮ ಮತ್ತು ದುರಾಚಾರಗಳಿಂದ ದೂರವಿದ್ದವನು, ಈ ಲೋಕದಲ್ಲಿ ತಾಯಿಯ ಹೊಟ್ಟೆಯಿಂದ ನಿರ್ದೋಷಿಯಾಗಿ ಬಂದವನಂತೆ ಪರಿಶುದ್ಧನಾಗಿ ಮರಳುವನು. (ಬುಖಾರಿ, ಮುಸ್ಲಿಮ್)

ಹಜ್ಜ್ ಮಬ್‌ರೂರ್‌ನ ಪ್ರತಿಫಲ ಸ್ವರ್ಗವೇ ಆಗಿದೆ. (ಬುಖಾರಿ, ಮುಸ್ಲಿಮ್)

ಹಜ್ಜ್ ಗತ ಪಾಪಗಳ ಕ್ಷಮೆಯ ಹೇತುವಾಗಿದೆ. (ಮುಸ್ಲಿಮ್)

ವೃದ್ಧಾಪ್ಯಕ್ಕೆ ತಲಪಿದ ಪುರುಷ ಮತ್ತು ಸ್ತ್ರೀಯ ಹಜ್ಜ್ ಮತ್ತು ಉಮ್ರಾ ಜಿಹಾದ್‌ಗೆ ಸಮಾನವಾಗಿದೆ. (ನಸಾಈ)

ಕುಲುಮೆಯು ಕಬ್ಬಿಣ, ಚಿನ್ನ ಮತ್ತು ಬೆಳ್ಳಿಯ ಕೊಳೆಯನ್ನು ನೀಗಿಸುವಂತೆ ಹಜ್ಜ್ ಮತ್ತು ಉಮ್ರಾಗಳು ಬಡತನ ಮತ್ತು ಪಾಪಗಳನ್ನು ನೀಗಿಸುತ್ತವೆ. (ತಿರ್ಮಿದಿ)

ಅಲ್ಲಾಹನ ಭವನದ ಕಡೆಗೆ ಹಾಜಿ(ಯಾತ್ರಿಕ) ಮತ್ತು ಅವನ ಸವಾರಿಯು ಇಡುವ ಪ್ರತಿಯೊಂದು ಹೆಜ್ಜೆಯು ಅವನ ಒಂದು ಪಾಪವನ್ನು ಅಳಿಸುತ್ತದೆ ಮತ್ತು ಒಂದು ಸ್ಥಾನವನ್ನು ಏರಿಸುತ್ತದೆ. (ಬೈಹಕೀ)

ಹಜ್ಜ್ ಮತ್ತು ಉಮ್ರಾ ಮಾಡುವವರು ಅಲ್ಲಾಹನ ಅತಿಥಿಗಳು. ಅಲ್ಲಾಹನ ಆಮಂತ್ರಣ ಪ್ರಕಾರ ಅವರು ದೇವಭವನಕ್ಕೆ ಬಂದಿದ್ದಾರೆ. ಅವರು ಪ್ರಾರ್ಥಿಸಿದಾಗ ಅಲ್ಲಾಹನು ಸ್ವೀಕರಿಸುವನು. (ನಸಾಈ)

ಹಾಜಿಯ ಪ್ರಾರ್ಥನೆ ಅವನಿಗಂತೂ ಸ್ವೀಕೃತವಾಗುತ್ತದೆ. ಅವನು ಯಾರಿಗಾಗಿ ಪ್ರಾರ್ಥಿಸುತ್ತಾನೋ ಅವನಿಗಾಗಿಯೂ ಸ್ವೀಕೃತವಾಗುತ್ತದೆ. (ಮುಸ್ತದ್ರಕ್ ಹಾಕಿಮ್)

ಹಜ್ಜ್ ಮತ್ತು ಉಮ್ರಾದ ದಾರಿಯಲ್ಲಿ ಮರಣ ಹೊಂದಿದವರಿಗೆ ಪುನರುತ್ಥಾನದ ವರೆಗೂ ಹಜ್ಜ್ ಮತ್ತು ಉಮ್ರಾದ ಪುಣ್ಯಫಲ ಸಿಗುತ್ತಲೇ ಇರುವುದು.

**(ಅಬೂಯಅ್‌ಲಾ)**

ಹಜ್ಜ್‌ನ ಮಾರ್ಗದಲ್ಲಿ ಮರಣಹೊಂದುವ ಹಾಜಿಯು ಹಶ್ರ್‌ನ ಮೈದಾನದಲ್ಲಿ ಇಹ್ರಾಮಿನಲ್ಲಿ ಲಬ್ಬೈಕ್..... ಎಂದು ಹೇಳುತ್ತಲೇ ಎದ್ದು ಬರುವನು.

**(ಬುಖಾರಿ, ಮುಸ್ಲಿಮ್)**

ಹಜ್ಜ್‌ನ ಪುಣ್ಯಫಲವು ಅವನು ಪಟ್ಟ ಕಷ್ಟ ಮತ್ತು ಮಾಡಿದ ವೆಚ್ಚಕ್ಕನುಸಾರ ಸಿಗುತ್ತದೆ. **(ಮುಸ್ತದ್ರಕ್ ಹಾಕಿಮ್)**

ರಮಝಾನ್ ತಿಂಗಳ ಉಮ್ರಾವು ಹಜ್ಜ್‌ಗೆ ಸಮಾನವಾಗಿದೆ.

**(ಬುಖಾರಿ, ಮುಸ್ಲಿಮ್)**

ಜೀವಮಾನದಲ್ಲಿ ಒಮ್ಮೆ ಹಜ್ಜ್ ಮಾಡುವುದು ಫರ್ಝ್ (ಕಡ್ಡಾಯ). ಇದಕ್ಕಿಂತ ಹೆಚ್ಚು ಮಾಡುವುದು ನಫಿಲ್(ಐಚ್ಛಿಕ) ಆಗಿರುತ್ತದೆ. **(ಅಹ್ಮದ್, ನಸಾಈ, ದಾರಿಮಿ)**

## ಹಜ್ಜ್ ಮಾಡದವನಿಗೆ ಎಚ್ಚರಿಕೆ

ಹಜ್ಜ್ ಇಸ್ಲಾಮಿನ ಒಂದು ಆಧಾರ ಸ್ತಂಭ. ಅದು ಕಡ್ಡಾಯವೆಂಬುದನ್ನು ನಿರಾಕರಿಸುವವನು ಕಾಫಿರ್, ಮುರ್ತದ್ ಮತ್ತು ಧರ್ಮಬಾಹಿರನಾಗುತ್ತಾನೆ. ಶಕ್ತನಾಗಿದ್ದೂ ಹಜ್ಜ್ ಯಾತ್ರೆ ಮಾಡದವನ ಕುರಿತು ಪ್ರವಾದಿವರ್ಯರು(ಸ) ಹೀಗೆಂದಿದ್ದಾರೆ-

"ಅಲ್ಲಾಹನ ಭವನದ ವರೆಗೆ ಪ್ರಯಾಣ ವೆಚ್ಚ, ಸವಾರಿ ಸೌಕರ್ಯವಿದ್ದೂ ಹಜ್ಜ್ ಮಾಡದವನು ಯಹೂದಿ ಅಥವಾ ಕ್ರೈಸ್ತನಾಗಿ ಸಾಯುವುದೂ ಸರಿಯೇ." **(ತಿರ್ಮಿದಿ)** ಆದುದರಿಂದಲೇ ಕುರ್‌ಆನಿನಲ್ಲಿ, "ಆ ಭವನದ ವರೆಗೆ ಹೋಗಲು ಅನುಕೂಲಸ್ಥರಾದವರ ಮೇಲೆ ಅದರ ಹಜ್ಜ್ ಮಾಡಬೇಕಾದುದು ಅಲ್ಲಾಹನಿಗೆ ಸಲ್ಲತಕ್ಕ ಹಕ್ಕಾಗಿರುತ್ತದೆ ಎನ್ನಲಾಗಿದೆ." **(ಪವಿತ್ರ ಕುರ್‌ಆನ್, 3:97)**

## ಹಜ್ಜ್ ಕಡ್ಡಾಯಗೊಳ್ಳುವ ಶರತ್ತುಗಳು

1. ಅವನು ಮುಸ್ಲಿಮನಾಗಿರಬೇಕು.
2. ಅವನ ಬುದ್ಧಿ ಸ್ಥಿಮಿತದಲ್ಲಿರಬೇಕು.
3. ಅವನು ಪ್ರಾಪ್ತ ವಯಸ್ಕನಾಗಿರಬೇಕು.
4. ದಾರಿಯಲ್ಲಿ ಶಾಂತಿ ಸುರಕ್ಷತೆ ಇರಬೇಕು.
5. ಆರ್ಥಿಕ ಬಲವಿರಬೇಕು. (ಅರ್ಥಾತ್ ಹೋಗಿ ಬರುವ ಮತ್ತು ಹಜ್ಜ್ ಯಾತ್ರೆಯ ಕಾಲಾವಧಿಯಲ್ಲಿ ಮನೆಯವರಿಗೆ ಖರ್ಚಿನ ವ್ಯವಸ್ಥೆ ಇರಬೇಕು)

ಈ ಶರತ್ತುಗಳು ಪೂರ್ತಿಗೊಂಡ ಬಳಿಕ ಸ್ವಲ್ಪವೂ ವಿಳಂಬ ಮಾಡಬಾರದು. "ಹಜ್ಜ್‌ಯಾತ್ರೆಗೆ ತ್ವರೆ ಮಾಡಿರಿ. ಮುಂದೆ ಯಾವ ಅಡ್ಡಿ ಆತಂಕ ಉಂಟಾಗಲಿದೆಯೆಂದು ಹೇಳಲಿಕ್ಕಾಗದು." (ಅಹ್ಮದ್)

## ಸ್ತ್ರೀಯ ಹಜ್ಜ್

ಪುರುಷರಿಗೆ ಹಜ್ಜ್ ಯಾತ್ರೆ ಕಡ್ಡಾಯವಾಗಿರುವ ಹಾಗೆಯೇ ಸ್ತ್ರೀಯರಿಗೂ ಕಡ್ಡಾಯವಾಗಿದೆ. ಎರಡು ವರ್ಗದವರಿಗೂ ಶರತ್ತುಗಳು ಏಕ ಪ್ರಕಾರವಾದರೂ ಸ್ತ್ರೀಯ ಜತೆ ಅವಳ ಪತಿ ಅಥವಾ ಶಾಶ್ವತ ಮುಹ್ರಿಮ್ ಸಂಬಂಧಿಕನಿರಲೇಬೇಕೆಂಬ ಹೆಚ್ಚುವರಿ ಶರತ್ತಿದೆ.

ಮುಹ್ರಿಮ್ ಪುರುಷನೆಂದರೆ ಆ ಸ್ತ್ರೀಯೊಂದಿಗೆ ವಿವಾಹವು ಶಾಶ್ವತವಾಗಿ ಹರಾಮ್ ಆಗಿರುವಂತಹ ಸಂಬಂಧಿಕ. ಅಪ್ರಾಪ್ತ ವಯಸ್ಕನಾದ ಹುಡುಗ, ಗುಲಾಮ, ಮುದುಕ ಅಥವಾ ಇನ್ನೊಬ್ಬ ಸ್ತ್ರೀಯು ಮುಹ್ರಿಮ್ ಆಗಲಾರರು. ಸ್ತ್ರೀಯು ಯಾವ ಹರೆಯದವಳೇ ಆಗಿದ್ದರೂ ಪತಿ ಅಥವಾ ಮುಹ್ರಿಮ್ ಸಂಬಂಧಿಕರಿಲ್ಲದೆ ಒಬ್ಬಳೇ ಹಜ್ಜ್ ಯಾತ್ರೆಯ ಸಂಕಲ್ಪ ಮಾಡಬಾರದು. ಹಾಗೆ ಅವಳು ಮನೆಯಿಂದ ಪ್ರಯಾಣಕ್ಕೆ ಹೊರಡುವುದೂ ನಿಷಿದ್ಧ.

ಇಮಾಮ್ ಶಾಫಿಈಯವರ ಪ್ರಕಾರ ಸ್ತ್ರೀಯೊಂದಿಗೆ ಆಕೆಯ ಪತಿ ಅಥವಾ ಮುಹ್ರಿಮ್ ಸಂಬಂಧಿಕರು ಇರಬೇಕೆಂಬ ನಿರ್ಬಂಧವಿಲ್ಲ. ಶಾಂತಿ ಅರ್ಥಾತ್ ಅಪಾಯದ ಪರಿಸ್ಥಿತಿ ಇಲ್ಲದಿರುವುದೇ ನೈಜ ಶರತ್ತಾಗಿದೆ. ಆಕೆ ಯಾವುದೇ ಸಜ್ಜನ ಸ್ತ್ರೀಯೊಂದಿಗೆ ಪ್ರಯಾಣ ಮಾಡಬಲ್ಲಳೆಂದಾದರೆ ಆಕೆಯ ಮೇಲೆ ಹಜ್ಜ್ ನಿರ್ವಹಣೆ ಕಡ್ಡಾಯವಾಗಿದೆ.

ಹಜ್ಜ್ ಯಾತ್ರೆಯ ಎಲ್ಲ ಶರತ್ತುಗಳೂ ಪೂರ್ತಿಗೊಂಡಿದ್ದು ಮುಹ್ರಿಮನೂ ಜೊತೆಗಿದ್ದರೆ ಸ್ತ್ರೀಯು ಪತಿಯ ಅನುಮತಿ ಪಡೆದು ಹಜ್ಜ್ ಯಾತ್ರೆಗೆ ಹೋಗಬಹುದು. ಪತಿ ಅನುಮತಿಸದಿದ್ದರೆ ಅವನ ಅನುಮತಿಯ ಹೊರತಾಗಿಯೂ ಹಜ್ಜ್ ಯಾತ್ರೆಗೆ ಹೋಗಬಹುದು. ಏಕೆಂದರೆ ಅಲ್ಲಾಹನು ಕಡ್ಡಾಯಗೊಳಿಸಿರುವ ಕರ್ಮದ ಪಾಲನೆಯಿಂದ ತಡೆಯುವ ಹಕ್ಕು ಪತಿಗೂ ಇಲ್ಲ. ಆದರೆ ನಫಿಲ್ (ಐಚ್ಛಿಕ) ಹಜ್ಜ್ ಆಗಿದ್ದರೆ ಅದಕ್ಕೆ ಪತಿಯ ಅನುಮತಿ ಕಡ್ಡಾಯ.

## ಅಪ್ರಾಪ್ತ ವಯಸ್ಕರ (ಮಕ್ಕಳ) ಹಜ್ಜ್

ಅಪ್ರಾಪ್ತ ವಯಸ್ಕರಾದ ಬಾಲಕ ಬಾಲಕಿಯರಿಗೆ ಹಜ್ಜ್ ಕಡ್ಡಾಯವಲ್ಲ. ಆದರೂ ಅವರು ಹಜ್ಜ್ ಮಾಡಬಹುದು. ಅದರ ಪುಣ್ಯಫಲವು ಅವರ ಸಂರಕ್ಷಕರಿಗೆ ಸಿಗುವುದು. ಅವರು ಪ್ರಾಪ್ತ ವಯಸ್ಕರಾದ ಬಳಿಕ ಅವರ ಮೇಲೆ ಹಜ್ಜ್ ಕಡ್ಡಾಯಗೊಳ್ಳುವುದು. ಆಗ ಪುನಃ ಮಾಡಬೇಕಾಗುವುದು. ಒಬ್ಬ ಸ್ತ್ರೀಗೆ ಅಗತ್ಯವಿರುವ ಎಲ್ಲವೂ ಬಾಲಕಿಗೂ ಅಗತ್ಯವಿದೆ.

## ಬದಲಿ ಹಜ್ಜ್

ಹಜ್ಜ್ ಕಡ್ಡಾಯವಾಗಿರುವವನು ಮೃತನಾದರೆ ಅಥವಾ ಹಜ್ಜ್ ಮಾಡುವೆನೆಂದು ಸಂಕಲ್ಪ ಮಾಡಿ ಅದನ್ನು ನೆರವೇರಿಸುವುದಕ್ಕೆ ಮುಂಚೆ ಮೃತನಾದರೆ ಅವನ ಸಂಪತ್ತಿನಿಂದ ಅವನ ಉತ್ತರಾಧಿಕಾರಿ ಹಜ್ಜ್ ಮಾಡಬೇಕು. ಇಲ್ಲವೆ ಇತರರಿಂದ ಹಜ್ಜ್ ಮಾಡಿಸಬಹುದು. ಇಂತಹ ಸಂದರ್ಭದಲ್ಲಿ ಅದನ್ನು ನೆರವೇರಿಸಬೇಕಾದುದು ವಾಜಿಬ್(ಕಡ್ಡಾಯ) ಆಗಿದೆ. ಹಜ್ಜ್ ಕಡ್ಡಾಯಗೊಂಡವನು ಅದನ್ನು ನೆರವೇರಿಸುವುದಕ್ಕೆ ಮುಂಚಿತವಾಗಿ ಮೃತನಾದರೆ, ಅವನು ಬಿಟ್ಟು ಹೋದ ಸಂಪತ್ತನ್ನು ಉತ್ತರಾಧಿಕಾರಿಗಳೊಳಗೆ ಹಂಚುವುದಕ್ಕೆ ಮುಂಚೆ ಮೃತನ ಕಡೆಯಿಂದ ಬದಲಿ ಹಜ್ಜ್ ಮಾಡಿಸಲಿಕ್ಕಾಗಿ ಹಣವನ್ನು ಪ್ರತ್ಯೇಕಿಸಿಡಬೇಕು. ಏಕೆಂದರೆ ಇದು ಅಲ್ಲಾಹನ ಋಣವಾಗಿದ್ದು ಇದನ್ನು ಪ್ರಥಮತಃ ಸಂದಾಯ ಮಾಡಬೇಕು.

ಎಲ್ಲ ಶರತ್ತುಗಳು ಪೂರ್ತಿಗೊಂಡಿದ್ದು ಅನಾರೋಗ್ಯ ಅಥವಾ ವೃದ್ಧಾಪ್ಯದಿಂದಾಗಿ ಹಜ್ಜ್ ಮಾಡಲಾಗದಿದ್ದರೂ ಬೇರೆಯವರಿಂದ ತನ್ನ ಪರವಾಗಿ ಬದಲಿ ಹಜ್ಜ್ ಮಾಡಿಸಬಹುದು. ಆದರೆ ಬದಲಿ ಹಜ್ಜ್ ಮಾಡುವವನು ತನ್ನ ಹಜ್ಜ್ ಯಾತ್ರೆಯನ್ನು ಈ ಮೊದಲು ಮಾಡಿದವನಾಗಿರಬೇಕು.

ಬದಲಿ ಹಜ್ಜ್ ಮಾಡಿದವನು, ಯಾರ ಪರವಾಗಿ ಅದನ್ನು ಮಾಡಲಾಗಿದೆಯೋ ಅವನು ಮತ್ತು ಹಜ್ಜ್ ಯಾತ್ರೆಯ ವೆಚ್ಚ ಭರಿಸಿದವನು ಈ ಮೂವರೂ ಏಕ ಪ್ರಕಾರ ಪುಣ್ಯಫಲ ಪಡೆಯುತ್ತಾರೆ. ಹಜ್ಜ್ ಕಡ್ಡಾಯಗೊಂಡ ಬಳಿಕ ಒಬ್ಬನಿಗೆ ಕಾಲಾವಕಾಶ ಸಿಗದಿದ್ದರೆ ಅಥವಾ ಅದೇ ವರ್ಷ ಹಜ್ಜ್ ಯಾತ್ರೆಗೆ ಹೊರಟು ದಾರಿಯಲ್ಲಿ ಮರಣ ಹೊಂದಿದರೆ ಆ ವ್ಯಕ್ತಿಯ ಮೇಲೆ ಹಜ್ಜ್‌ನ ಋಣವಿಲ್ಲ.

## ಉಮ್ರಾ

ಪವಿತ್ರ ಕಅಬಾವನ್ನು ಸಂದರ್ಶಿಸುವ ಒಂದು ವಿಶಿಷ್ಟ ರೀತಿಯನ್ನು ಉಮ್ರಾ ಎನ್ನಲಾಗುತ್ತದೆ. ಇದರಲ್ಲಿ ಹಜ್ಜ್‌ನಂತೆಯೇ ಇಹ್ರಾಮ್ ಕಟ್ಟಲಿಕ್ಕಿದೆ. ಉಮ್ರಾ ಮಾಡುವವನು ಮೀಕಾತಿನಿಂದ ಉಮ್ರಾದ ನಿಯ್ಯತ್‌ನೊಂದಿಗೆ ಇಹ್ರಾಮ್ ಕಟ್ಟಿ ತಲ್ಬಿಯ ಹೇಳುತ್ತಾ ಮಕ್ಕಾಕ್ಕೆ ಬರುತ್ತಾನೆ. ಮೊದಲು ಅಲ್ಲಾಹನ ಭವನದ ತವಾಫ್ ಮಾಡುತ್ತಾನೆ. ತವಾಫ್‌ನ ಬಳಿಕ ಮಕಾಮು ಇಬ್‌ರಾಹೀಮ್‌ನಲ್ಲಿ ಎರಡು ರಕಅತ್ ನಮಾಝ್ ಮಾಡುತ್ತಾನೆ. ಅನಂತರ ಸಫಾ ಮತ್ತು ಮರ್ವಾಗಳ ನಡುವೆ ಸಈ ಮಾಡುತ್ತಾನೆ. ಇದಾದ ಬಳಿಕ ತಲೆ ಬೋಳಿಸಿ ಅಥವಾ ತಲೆ ಕೂದಲು ಕತ್ತರಿಸಿ ಹಲಾಲ್ ಆಗುತ್ತಾನೆ. ಅರ್ಥಾತ್ ಇಹ್ರಾಮಿನ ನಿರ್ಬಂಧಗಳಿಂದ ಹೊರ ಬರುತ್ತಾನೆ.

ಉಮ್ರಾ ಮಾಡಲು ನಿಗದಿತ ಕಾಲವೆಂಬುದಿಲ್ಲ. ವರ್ಷದ ಎಲ್ಲಾ ತಿಂಗಳುಗಳಲ್ಲೂ ಮಾಡಬಹುದು. ಉಮ್ರಾ ಮಾಡುವ ಉದ್ದೇಶವನ್ನು ಮಾತ್ರ ಇಟ್ಟುಕೊಂಡು ಮನೆಯಿಂದ ಹೊರಡಲೂಬಹುದು.

ಉಮ್ರಾ ಅತ್ಯಂತ ತಾಕೀತು ಮಾಡಲ್ಪಟ್ಟ ಕರ್ಮ. ಹೆಚ್ಚೇಕೆ ವಾಜಿಬ್ ಕೂಡ ಆಗಿದೆ. ಒಂದು ಉಮ್ರಾ ಇನ್ನೊಂದು ಉಮ್ರಾದ ವರೆಗಿನ ಪಾಪಗಳಿಗೆ ಕಫ್ಫಾರಃ(ಪ್ರಾಯಶ್ಚಿತ್ತ) ಆಗಿದೆ ಮತ್ತು ಹಜ್ಜ್ ಮಬ್‌ರೂರ್‌ನ ಪ್ರತಿಫಲವು ಸ್ವರ್ಗವೇ ಆಗಿದೆ ಎಂದು ಪ್ರವಾದಿ(ಸ) ಹೇಳಿರುವುದಾಗಿ ಹ. ಅಬೂಹುರೈರಾ(ರ) ವರದಿ ಮಾಡಿದ್ದಾರೆ. (ಬುಖಾರಿ, ಮುಸ್ಲಿಮ್)

ಹರಮ್‌ನ ಗಡಿಯೊಳಗೆ ವಾಸಿಸುವ ಖಾಯಂ ನಿವಾಸಿ ಉಮ್ರಾ ಮಾಡಬೇಕೆಂದಾಗ ಹರಮಿನ ಗಡಿಯ ಹೊರಗೆ (ಹಿಲ್ಲ್‌ಗೆ) ಹೋಗಿ ಇಹ್ರಾಮ್ ಕಟ್ಟ ಬೇಕೆಂದಿಲ್ಲ. ಅವನು ಮಕ್ಕಾದಿಂದಲೇ ಇಹ್ರಾಮ್ ಕಟ್ಟಬಹುದು. ಆದರೆ ಮಕ್ಕಾದಲ್ಲಿ ವಾಸಿಸುವ ಹೊರಗಿನ ಹಾಜಿಗಳು (ಆಫಾಕೀಗಳು) ಮಾತ್ರ ಉಮ್ರಾ ಮಾಡಲು ಹರಮ್‌ನ ಗಡಿಯಿಂದ ಹೊರಗೆ ಹೋಗಿ ಇಹ್ರಾಮ್ ಕಟ್ಟಿಕೊಂಡು ಬರಬೇಕು. ಹಜ್ಜ್‌ನ ಇಹ್ರಾಮನ್ನು ಮಕ್ಕಾ ನಿವಾಸಿಗಳೂ ಹೊರಗಿನವರೂ ಮಕ್ಕಾದಿಂದಲೇ ಕಟ್ಟಬಹುದು.

ಹಜ್ಜ್‌ನ ಸಂದರ್ಭದಲ್ಲಿ ಮುಖ್ಯವಾಗಿ ಹಜ್ಜ್ ಕಳೆದ ಬಳಿಕ ಮೋಟಾರು ವಾಹನ ಚಾಲಕರು "ಸಣ್ಣ ಉಮ್ರಾ", "ದೊಡ್ಡ ಉಮ್ರಾ" ಎಂದು ಕೂಗಿ ಕರೆಯುವುದನ್ನೂ ಜನರು ತಂಡ ತಂಡಗಳಾಗಿ "ತನ್‌ಈಮ್" ಅಥವಾ "ಜಇರ್ರಾನ"ಕ್ಕೆ ಹೋಗಿ ಇಹ್ರಾಮ್ ಕಟ್ಟಿ ಬಂದು ಉಮ್ರಾ ಮಾಡುವುದನ್ನೂ ಕಾಣಬಹುದು. ಹೀಗೆ ಒಬ್ಬೊಬ್ಬರು ಹತ್ತಾರು ಉಮ್ರಾಗಳನ್ನು ಮಾಡುತ್ತಾರೆ. ಶರೀಅತ್‌ನಲ್ಲಿ ಇಂತಹ ಉಮ್ರಾಗಳ ಉಲ್ಲೇಖ ಎಲ್ಲೂ ಇಲ್ಲ.

ಉಮ್ರಾ ಮಾಡಲಿಕ್ಕಾಗಿ ಹೋಗುವವರೊಡನೆಯೂ ತಮಗಾಗಿ ಪ್ರಾರ್ಥಿಸಬೇಕೆಂದು ಹೇಳಬೇಕು. ಹ.ಉಮರ್‌ರು(ರ) ಪ್ರವಾದಿವರ್ಯರೊಡನೆ(ಸ) ಉಮ್ರಾ ಮಾಡಲು ಹೋಗುವುದಕ್ಕಾಗಿ ಅನುಮತಿ ಕೇಳಿದಾಗ لاَ تَنْسَانَا فِي دُعَائِكَ يَا أَخِي "ಲಾ ತನ್ಸಾನಾ ಫೀ **ದುಆಇಕ ಯಾ ಅಖೀ."** (ಸಹೋದರಾ, ನಿಮ್ಮ ದುಆಗಳಲ್ಲಿ ನಮ್ಮನ್ನು ಮರೆಯಬಾರದು) ಎಂದು ಪ್ರವಾದಿವರ್ಯರು(ಸ) ಹೇಳಿದ್ದರು.

ಹಜ್ಜ್‌ನಂತೆಯೇ ಉಮ್ರಾಕ್ಕೂ ಧಾರಾಳ ಪುಣ್ಯಫಲವಿದೆ. ಬದಲಿ ಉಮ್ರಾವನ್ನೂ ಮಾಡಬಹುದು.

ಹಜ್ಜ್ ಮತ್ತು ಉಮ್ರಾದ ವೇಳೆ ವ್ಯಾಪಾರ ಅಥವಾ ದೈಹಿಕ ಪರಿಶ್ರಮಗಳ ಮೂಲಕ ಸಂಪಾದನೆ ಮಾಡುವುದರಲ್ಲೂ ಅಡ್ಡಿ ಇಲ್ಲ. ಆದರೆ ಈ ಯಾತ್ರೆಯನ್ನು ಹಣ ಸಂಪಾದನೆಯ ಉದ್ದೇಶವನ್ನಿಟ್ಟುಕೊಂಡು ಮಾಡಬಾರದು. ಇದಕ್ಕಿಂತಲೂ ಕೀಳು ಮಟ್ಟಕ್ಕಿಳಿದು ಕಾಳಸಂತೆ, ಕಳ್ಳ ಸಾಗಾಣಿಕೆ, ಲಂಚ ಮೊದಲಾದ ಅಕ್ರಮ ವ್ಯವಹಾರಗಳಿಂದ ಸಂಪಾದಿಸುವುದು ಹರಾಮ್ ಆಗಿದೆ. ಸಂಕಲ್ಪದಂತೆಯೇ ಫಲ ಸಿಗುವುದು. ಆದುದರಿಂದ ಯಾವ ಸತ್ಕರ್ಮವೆಸಗುವಾಗಲೂ ಇದು ಕೇವಲ ಅಲ್ಲಾಹನ ಸಂಪ್ರೀತಿ ಪಡೆಯಲಿಕ್ಕಾಗಿ ಎಂಬ ಸಂಕಲ್ಪವು ಮನಸ್ಸಿನಲ್ಲಿ ಹಚ್ಚ ಹಸಿರಾಗಿರುವಂತೆ ನೋಡಿಕೊಳ್ಳಬೇಕು.

# ಹಜ್ಜ್ ನಿರ್ವಹಿಸುವ ಕ್ರಮ

ಭಾರತದಿಂದ ಹಜ್ಜ್ ಯಾತ್ರೆಗೆ ಹೊರಡುವವರು ಎಲ್ಲಾ ಸಿದ್ಧತೆಗಳಾದ ಬಳಿಕ ಅಲ್ಲಾಹನ ನಾಮದೊಂದಿಗೆ ಮನೆಯಿಂದ ಹೊರಡುತ್ತಾರೆ. ಅಧಿಕಾಂಶ ಹಾಜಿಗಳು "ತಮತ್ತುಲ್ ಹಜ್ಜ್" ಮಾಡುವುದರಿಂದ ಅಂತಹವರು ತಮ್ಮ ದೇಶಕ್ಕೆ ಸಂಬಂಧಿಸಿದ ಮೀಕಾತ್‌ಗೆ ತಲಪಿದೊಡನೆ ಉಮ್ರಾದ ನಿಯ್ಯತ್‌ನೊಂದಿಗೆ ಇಹ್ರಾಮ್ ಕಟ್ಟಿ ತಲ್ಬಿಯ ಆರಂಭಿಸುತ್ತಾರೆ. ಪ್ರಯಾಣ ಮುಂದುವರಿಸಿ ಹರಮ್‌ನೊಳಗೆ ಪ್ರವೇಶಿಸುತ್ತಾರೆ. ಕಅಬಾದಲ್ಲಿ ಹಜರುಲ್ ಅಸ್ವದ್‌ನ ಮುಂದೆ ತಲಪಿದಾಗ ತಲ್ಬಿಯ ಹೇಳುವುದನ್ನು ನಿಲ್ಲಿಸುತ್ತಾರೆ. ಅಲ್ಲಿ ತವಾಫ್‌ನ ನಿಯ್ಯತ್ ಮಾಡಿ ಇಸ್ತಿಲಾಮ್‌ನ ಬಳಿಕ ತವಾಫ್ ಆರಂಭಿಸುತ್ತಾರೆ. ಇದು ತವಾಫ್ ಕುದೂಮ್ ಆದುದರಿಂದ ಪ್ರಥಮ 3 ಸುತ್ತುಗಳನ್ನು ರಮಲ್ ಮತ್ತು ಇಳ್ತಿಬಾಅ್ ಸಹಿತ ಸುತ್ತುತ್ತಾರೆ. ತವಾಫ್‌ನ ಏಳೂ ಸುತ್ತುಗಳು ಸಂಪೂರ್ಣವಾದ ಬಳಿಕ ಮಕಾಮು ಇಬ್‌ರಾಹೀಮ್‌ನಲ್ಲಿ ಎರಡು ರಕಅತ್ ನಮಾಝ್ ಮಾಡುತ್ತಾರೆ. ಅನಂತರ ಮುಲ್ತಝಿಮ್‌ಗೆ ತೆರಳಿ ಅಲ್ಲಿ ಪ್ರಾರ್ಥಿಸುತ್ತಾರೆ. ತರುವಾಯ ಝಮ್‌ಝಮ್ ನೀರು ಕುಡಿದು ಬಂದು ಇಸ್ತಿಲಾಮಿನ ಬಳಿಕ "ಸಫಾ"ಕ್ಕೆ ಹೋಗುತ್ತಾರೆ. ಅಲ್ಲಿ ದುಆ ಮಾಡಿ ಮರ್ವಾಕ್ಕೆ ನಡೆಯುತ್ತಾರೆ. ಈ ಸಈಯ ಏಳನೆಯ ನಡಿಗೆ ಮರ್ವಾದಲ್ಲಿ ಕೊನೆಗೊಳ್ಳುತ್ತದೆ. ಅಲ್ಲಿ ದುಆ ಮಾಡಿದ ಬಳಿಕ ತಲೆ ಬೋಳಿಸಿ ಅಥವಾ ಕೂದಲು ಕತ್ತರಿಸಿ ಹಲಾಲ್ ಆಗುತ್ತಾರೆ. ಇಲ್ಲಿಗೆ ಉಮ್ರಾ ಮುಗಿಯಿತು.

***

ದುಲ್‌ಹಜ್ಜ್ ತಿಂಗಳ ದಿನಾಂಕ ಎಂಟರಂದು ಹಜ್ಜ್ ಮಾಡುವ ನಿಯ್ಯತ್ ಮಾಡಿ ಹರಮಿನಿಂದಲೇ ಇಹ್ರಾಮ್ ಕಟ್ಟಿ ತಲ್ಬಿಯ ಆರಂಭಿಸುತ್ತಾರೆ. ಅಂದು ಝುಹರ್ ನಮಾಝಿಗೆ ಮುಂಚೆ ಮಿನಾಕ್ಕೆ ತಲಪುತ್ತಾರೆ. ಮಿನಾದಲ್ಲಿ ಅಂದಿನ ಝುಹರ್ ಮತ್ತು ಮರುದಿನದ ಫಜ್ರ್ ನಮಾಝ್ ಸಹಿತ ಐದು ಹೊತ್ತುಗಳ ನಮಾಝ್ ಮಾಡುತ್ತಾರೆ. ಮರುದಿನ ದಿನಾಂಕ 9ರಂದು ಫಜ್ರ್ ನಮಾಝ್‌ನ ಬಳಿಕ ಅರಫಾತ್‌ಗೆ ಹೋಗಿ ಝುಹರ್‌ಗೆ ಮುಂಚೆ ತಲುಪುತ್ತಾರೆ. ಮಸ್ಜಿದ್ ನಮಿರದಲ್ಲಿ ಖುತ್‌ಬಾ ಆಲಿಸುತ್ತಾರೆ. ಅಲ್ಲಿ ಝುಹರ್ ಮತ್ತು ಅಸರ್ ನಮಾಝ್‌ಗಳನ್ನು ಜಮ್‌ಅ್ ಮತ್ತು ಕಸ್ರ್ ಸಹಿತ

ಸಾಮೂಹಿಕವಾಗಿ ನೆರವೇರಿಸುತ್ತಾರೆ. ಇಲ್ಲವೇ ತಮ್ಮ ತಮ್ಮ ಡೇರೆಗಳಲ್ಲೇ ನಮಾಝ್ ಮಾಡಿ ಅನಂತರ ಸೂರ್ಯಾಸ್ತದ ವರೆಗೂ ತಲ್ಬಿಯ, ದುಆ, ಸಲಾತ್, ತೌಬಾ, ಕೀರ್ತನೆಗಳನ್ನು ಮಾಡುತ್ತಲೇ ಇರುತ್ತಾರೆ. ಸೂರ್ಯನು ಮುಳುಗಿದೊಡನೆ ಅಲ್ಲಿ ಮಗ್ರಿಬ್ ನಮಾಝ್ ಮಾಡದೆ ಮುಝ್ದಲಿಫಾಕ್ಕೆ ಹೊರಡುತ್ತಾರೆ. ಮುಝ್ದಲಿಫಾಕ್ಕೆ ತಲಪಿದ ಬಳಿಕ ಮಗ್ರಿಬ್ ಮತ್ತು ಇಶಾ ನಮಾಝ್‌ಗಳನ್ನು ಏಕಕಾಲದಲ್ಲಿ ಜಮ್‌ಅ್ ಮಾಡಿ ರಾತ್ರಿ ಕಾಲವನ್ನು ಪ್ರಾರ್ಥನೆ ಇತ್ಯಾದಿಗಳಲ್ಲೇ ಕಳೆಯುತ್ತಾರೆ. ಮುಂಜಾನೆ ಫಜ್ರ್ ನಮಾಝನ್ನು ಆರಂಭದ ಹೊತ್ತಿನಲ್ಲೇ ಮುಗಿಸಿ ಏಳು ಹರಳುಕಲ್ಲುಗಳನ್ನು ಅಲ್ಲಿಂದ ಹೆಕ್ಕಿ ಮಿನಾಕ್ಕೆ ಪುನಃ ಬರುತ್ತಾರೆ. ಅಂದು ದುಲ್‌ಹಜ್ಜ್ ದಿನಾಂಕ 10. ಅಂದು ಜಮರತುಲ್ ಅಕಬಾಕ್ಕೆ ರಮಿಯ ಮಾಡುವುದು ಮುಖ್ಯ ಕಾರ್ಯ..

ಅದರ ಬಳಿಗೆ ತಲಪಿದೊಡನೆ ತಲ್ಬಿಯ ನಿಲ್ಲಿಸಲಾಗುವುದು. ರಮಿಯ ಆದ ಬಳಿಕ ಮಿನಾದಲ್ಲಿ ಪ್ರಾಣಿ ಬಲಿ ಕೊಟ್ಟು ತಲೆ ಬೋಳಿಸುತ್ತಾರೆ. ತರುವಾಯ ಮಕ್ಕಾಕ್ಕೆ ಹೋಗಿ ತವಾಫ್ ಇಫಾಝ ಅಥವಾ ತವಾಫ್ ಝಿಯಾರತ್ ಮಾಡಿ ಮಕಾಮು ಇಬ್‌ರಾಹೀಮ್‌ನಲ್ಲಿ ನಮಾಝ್ ಮಾಡಿ ಸಫಾ ಮರ್ವಾಗಳ ನಡುವೆ ಸಈ ಮುಗಿಸಿ ಮಿನಾಕ್ಕೆ ಮರಳುತ್ತಾರೆ. ರಾತ್ರೆ ಮಿನಾದಲ್ಲೇ ಕಳೆಯಬೇಕಾಗಿದೆ. ಮರುದಿನ (ದುಲ್ ಹಜ್ಜ್ 11ರಂದು) ಮೂರು ಜಮರಾತ್‌ಗಳಿಗೆ ಅನುಕ್ರಮವಾಗಿ ರಮಿಯ ಮಾಡಿ ರಾತ್ರೆ ಅಲ್ಲೇ ಕಳೆಯುತ್ತಾರೆ. ಒಂದು ವೇಳೆ ಮುಂಚಿನ ದಿನ ಪ್ರಾಣಿಬಲಿ, ತಲೆಬೋಳಿಸುವುದು ಮತ್ತು ತವಾಫ್ ಝಿಯಾರತ್‌ಗಳ ಪೈಕಿ ಯಾವುದಾದರೂ ಕರ್ಮವು ಉಳಿದು ಹೋಗಿದ್ದರೆ ಅವುಗಳನ್ನು ಆ ದಿನ ಮಾಡಿ ಮುಗಿಸುತ್ತಾರೆ. ಇದಕ್ಕೆ ದಿನಾಂಕ 12ರ ಸೂರ್ಯಾಸ್ತಯಾನ ವರೆಗೂ ಅವಕಾಶವಿದೆ. ದಿನಾಂಕ ಹನ್ನೆರಡರಂದೂ ಮೂರು ಜಮರಾತ್‌ಗಳಿಗೆ ರಮಿಯ ಮಾಡಿ ಸೂರ್ಯಾಸ್ತಮಾನಕ್ಕೆ ಮುಂಚೆ ಮಿನಾ ಬಿಟ್ಟು ಹೋಗಿ ಬಿಡುತ್ತಾರೆ. ಒಂದು ವೇಳೆ ಅಂದು ಸೂರ್ಯಾಸ್ತಮಾನ ಮುಂಚೆ ಮಿನಾ ಬಿಡದಿದ್ದರೆ ಆ ರಾತ್ರೆಯನ್ನು ಅಲ್ಲೇ ಕಳೆದು ಮರುದಿನವೂ ಮೂರು ಜಮರಾತ್‌ಗಳಿಗೆ ರಮಿಯ ಮಾಡಿದ ನಂತರವೇ ಮಿನಾ ಬಿಟ್ಟು ಹೋಗುತ್ತಾರೆ. ಸ್ವದೇಶಕ್ಕೆ ಮರಳುವುದಕ್ಕೆ ಮುಂಚೆ ಕಅಬಾಕ್ಕೆ ತವಾಫ್ ವಿದಾ ಮಾಡಿ ಅಲ್ಲಿಂದ ಹೊರಟು ಬರುತ್ತಾರೆ.

ಇಲ್ಲಿಗೆ ಹಜ್ಜ್ ಕರ್ಮ ಮುಗಿಯಿತು.

## ಝಿಯಾರತ್

ಹಜ್ಜ್‌ಗೆ ಮುಂಚೆ ಅಥವಾ ಅದರ ನಂತರ ಮದೀನಾಕ್ಕೆ ಹೋಗಿ ಅಲ್ಲಿರುವ ಮಸ್ಜಿದುನ್ನಬವೀ ಮತ್ತು ಪ್ರವಾದಿವರ್ಯರ(ಸ) ಸಮಾಧಿಯನ್ನು ಈ ರೀತಿಯಲ್ಲಿ ಸಂದರ್ಶಿಸುತ್ತಾರೆ.

ಮಸ್ಜಿದುನ್ನಬವೀಯೊಳಗೆ ಇತರ ಮಸೀದಿಗಳಿಗೆ ಪ್ರವೇಶಿಸುವಂತೆಯೇ ದುಆ ಮಾಡುತ್ತ ಪ್ರವೇಶಿಸಿ, رَوْضَةٌ مِنْ رِيَاضِ الْجَنَّةِ "ರೌದತುಮ್ಮಿನ್ ರಿಯಾದಿಲ್

ಜನ್ನ" (ಸ್ವರ್ಗದ ತೋಟಗಳ ಪೈಕಿ ಒಂದು ತೋಟ)ದಲ್ಲಿ ಎರಡು ರಕಅತ್ ತಹಿಯ್ಯತುಲ್ ಮಸ್ಜಿದ್ ನಮಾಝ್ ನಿರ್ವಹಿಸುತ್ತಾರೆ. ತರುವಾಯ ಪ್ರವಾದಿವರ್ಯರ(ಸ) ಸಮಾಧಿಯ ಪಕ್ಕದಲ್ಲಿ ನಿಂತು ಅವರಿಗೆ ಸಲಾತ್ ಮತ್ತು ಸಲಾಮ್ ಸಲ್ಲಿಸುತ್ತಾರೆ. ಅಲ್ಲೇ ಸಮಾಧಿಸ್ಥರಾಗಿರುವ ಹ.ಅಬೂಬಕರ್(ರ) ಮತ್ತು ಹ.ಉಮರ್‌ರಿಗೂ(ರ) ಸಲಾಮ್ ಹೇಳಿದ ಬಳಿಕ ಕಿಬ್ಲಾಭಿಮುಖವಾಗಿ ಅಲ್ಲಾಹನನ್ನು ಪ್ರಾರ್ಥಿಸುತ್ತಾರೆ. ಮದೀನಾದಲ್ಲಿರುವ ವರೆಗೂ ಪ್ರತಿ ನಮಾಝನ್ನು ಮಸ್ಜಿದ್ ನಬವಿಯಲ್ಲೇ ಜಮಾಅತ್‌ನೊಂದಿಗೆ ಮಾಡುತ್ತಾರೆ. ಮಸ್ಜಿದ್‌ಕುಬಾ, ಉಹುದ್, ಖಂದಕ್, ಜನ್ನತುಲ್ ಬಕೀ ಮೊದಲಾದ ಸ್ಥಳಗಳನ್ನು ಸಂದರ್ಶಿಸುತ್ತಾರೆ.

ಹಜ್ಜ್, ಉಮ್ರಾ ಮತ್ತು ಝಿಯಾರತ್‌ಗಳ ಈ ಸಂಕ್ಷಿಪ್ತ ವಿವರಣೆಯು ಎಲ್ಲರಿಗೂ ಸಾಕಾಗಲಿಕ್ಕಿಲ್ಲ. ಅದಕ್ಕಾಗಿ ಹೆಚ್ಚಿನ ವಿವರವನ್ನು ಮುಂದೆ ಕೊಡಲಾಗುವುದು. ದಪ್ಪಕ್ಷರಗಳಲ್ಲಿ ಕೊಟ್ಟಿರುವ ಪಾರಿಭಾಷಿಕ ಪದಗಳ ಅರ್ಥವನ್ನೂ ಕೊನೆಯಲ್ಲಿ ಕೊಡಲಾಗಿದೆ.

## ಹಜ್ಜ್ ಯಾತ್ರೆಯ ವಿಧಗಳು

ಹಜ್ಜ್‌ಯಾತ್ರೆಯ ಮೂರು ವಿಧಗಳಿವೆ- 1) ಇಫ್ರಾದ್. 2) ಕಿರಾನ್. 3) ತಮತ್ತುಅ್. ಮೂರೂ ವಿಧಗಳಲ್ಲಿ ಮುಖ್ಯ ವಿಧಿ ಕರ್ಮಗಳು ಏಕ ಪ್ರಕಾರವಾಗಿವೆ. ಅವುಗಳಲ್ಲಿರುವ ವ್ಯತ್ಯಾಸ ಕೆಳಗೆ ಕಾಣಿಸಿದ ಪ್ರಕಾರ ಇರುವುದು.

**1. ಇಫ್ರಾದ್:** ಇದರಲ್ಲಿ ಹಜ್ಜ್ ನಿರ್ವಹಿಸುವ ನಿಯ್ಯತ್ ಮಾತ್ರ ಮಾಡಿ ಇಹ್ರಾಮ್ ಕಟ್ಟಿ, ಹಜ್ಜ್‌ನ ಎಲ್ಲ ವಿಧಿ ಕರ್ಮಗಳನ್ನು ಪೂರ್ತಿಗೊಳಿಸುವುದು. ಉಮ್ರಾ ಮಾಡುವುದಿಲ್ಲ. ಈ ಯಾತ್ರಿಕನನ್ನು 'ಮುಫ್ರಿದ್' ಎನ್ನುತ್ತಾರೆ. ಮುಫ್ರಿದ್ ಹಾಜಿಯು ದುಲ್‌ಹಜ್ಜ್ ಹತ್ತರಂದು ಇಹ್ರಾಮ್ ಬಿಚ್ಚುವುದಕ್ಕೆ ಮುಂಚೆ ಪ್ರಾಣಿಬಲಿ ಕೊಡಬೇಕಾಗಿಲ್ಲ. ಮುಫ್ರಿದ್ ಇಹ್ರಾಮ್ ಕಟ್ಟುವಾಗ "ಲಬ್ಬೈಕ ಹಜ್ಜತನ್" (ಓ ಅಲ್ಲಾಹ್! ನಾನು ಹಜ್ಜ್‌ಗೆ ಹಾಜರಾಗಿದ್ದೇನೆ) ಎಂದು ಹಜ್ಜ್‌ನ ನಿಯ್ಯತ್ ಮಾಡಬೇಕು.

**2. ಕಿರಾನ್:** ಈ ತರದ ಹಾಜಿಯು ಮೀಕಾತ್‌ನಿಂದ ಹಜ್ಜ್ ಮತ್ತು ಉಮ್ರಾಗಳಿಗೆ ಒಟ್ಟಾಗಿ ಇಹ್ರಾಮ್ ಕಟ್ಟಬೇಕು. ಇಹ್ರಾಮ್ ಕಟ್ಟುವ ವೇಳೆ- "ಲಬ್ಬೈಕ ಹಜ್ಜಂವ ಉಮ್ರಾ" (ಓ ಅಲ್ಲಾಹ್ ನಾನು ಹಜ್ಜ್ ಮತ್ತು ಉಮ್ರಾ ಮಾಡಲು ಹಾಜರಾಗಿದ್ದೇನೆ) ಎಂದು ನಿಯ್ಯತ್ ಮಾಡಬೇಕು. ಈ ಯಾತ್ರಿಕನನ್ನು 'ಕಾರಿನ್' ಎನ್ನುತ್ತಾರೆ. ಕಾರಿನ್ ಮಕ್ಕಾ ತಲಪಿದೊಡನೆ ಮೊದಲು ಉಮ್ರಾ ಮಾಡಬೇಕು. ಆದರೆ ಉಮ್ರಾ ಆದ ಮೇಲೆ ಇಹ್ರಾಮ್ ಬಿಚ್ಚಬಾರದು. ಅದೇ ಇಹ್ರಾಮಿನಲ್ಲಿ ಹಜ್ಜ್‌ನ ವಿಧಿ ಕರ್ಮಗಳನ್ನು ನೆರವೇರಿಸಬೇಕು. ಪ್ರಾಣಿ ಬಲಿ ಮತ್ತು ತವಾಫ್ ಝಿಯಾರತ್ ಮುಗಿಸದೆ ಇಹ್ರಾಮ್ ಬಿಚ್ಚಬಾರದು. ಪ್ರವಾದಿವರ್ಯರು(ಸ) ಹಜ್ಜತುಲ್ ವಿದಾದ ವೇಳೆ ಕಾರಿನ್ ಆಗಿದ್ದರು.

**3. ತಮತ್ತುಅ್:** ಇದರಲ್ಲಿ ಹಾಜಿಯು ಮೀಕಾತ್‌ನಿಂದ ಉಮ್ರಾದ ನಿಯ್ಯತ್ ಮಾತ್ರ ಮಾಡಿ ಇಹ್ರಾಮ್ ಕಟ್ಟುತ್ತಾನೆ. ಮಕ್ಕಾಕ್ಕೆ ತಲಪಿ, ಅಲ್ಲಾಹನ ಭವನದ ತವಾಫ್,

ಮಕಾಮು ಇಬ್‌ರಾಹೀಮ್‌ನಲ್ಲಿ ನಮಾಝ್, ಸಫಾ ಮರ್ವಾಗಳ ನಡುವಿನ ಸಈ ಮುಗಿಸಿ, ತಲೆಕ್ಷೌರ ಮಾಡಿಸಿ ಅಥವಾ ತಲೆ ಕೂದಲು ಕತ್ತರಿಸಿ ಇಹ್ರಾಮ್ ಬಿಚ್ಚುತ್ತಾನೆ. ಇವನ ಉಮ್ರಾ ಮುಗಿಯಿತು. ಅನಂತರ ಹಜ್ಜ್ ದಿನಗಳು ಬರುವವರೆಗೂ ಅವನ ಮೇಲೆ ಇಹ್ರಾಮ್‌ನ ನಿರ್ಬಂಧಗಳೇನೂ ಇಲ್ಲ. ಇನ್ನು ದುಲ್‌ಹಜ್ಜ್ 8ರಂದು ಮುಂಜಾನೆ ಹಜ್ಜ್ ಮಾಡುವ ನಿಯ್ಯತ್‌ನೊಂದಿಗೆ ಪುನಃ ಇಹ್ರಾಮ್ ಕಟ್ಟಿ ಹಜ್ಜ್‌ನ ಎಲ್ಲ ವಿಧಿ ಕರ್ಮಗಳನ್ನು ಪೂರ್ತಿಗೊಳಿಸುತ್ತಾನೆ. ಈ ತರದ ಹಜ್ಜ್ ಯಾತ್ರಿಕನನ್ನು "ಮುತಮತ್ತಅ್" ಎನ್ನುತ್ತಾರೆ. ಭಾರತದಿಂದ ಹೋಗುವ ಹೆಚ್ಚಿನ ಯಾತ್ರಿಕರು ಈ ತರದ ಹಜ್ಜ್ ಯಾತ್ರೆಯನ್ನೇ ಮಾಡುತ್ತಾರೆ.

## ಮೀಕಾತ್‌ಗಳು

ಮೀಕಾತ್‌ಗಳ ಬಗ್ಗೆ ತಿಳಿಯುವುದಕ್ಕೆ ಮುಂಚೆ ಹಜ್ಜ್ ಯಾತ್ರೆಯ ದೃಷ್ಟಿಯಿಂದ ಭೂಮಿಯಲ್ಲಿ ಮೂರು ಪ್ರತ್ಯೇಕ ಕ್ಷೇತ್ರಗಳನ್ನು ಗುರುತಿಸಲಾಗಿದೆ ಎಂಬುದನ್ನು ಗಮನಿಸಬೇಕು:

1. ಹರಮ್- ಮಕ್ಕಾ ನಗರ ಮತ್ತು ಅದರ ಪರಿಸರದ ನಿಶ್ಚಿತ ಭಾಗ. ಹರಮ್‌ನಲ್ಲಿ ವಾಸಿಸುವವರನ್ನು ಹರಮೀ ಎನ್ನುತ್ತಾರೆ. ಹರಮ್‌ನ ಗಡಿಗಳನ್ನು ಪ್ರವಾದಿವರ್ಯರೇ(ಸ) ಸೂಚಿಸಿರುತ್ತಾರೆ.
2. ಹಿಲ್ಲ್- ಹರಮ್‌ನ ಗಡಿಯಿಂದ ಹೊರಗೆ ಮತ್ತು ಮೀಕಾತ್‌ನ ಗಡಿಗಳ ಒಳಗಿನ ಪ್ರದೇಶ. ಇಲ್ಲಿಯ ನಿವಾಸಿಗಳನ್ನು 'ಹಿಲ್ಲೀ' ಎನ್ನುತ್ತಾರೆ. ಮೀಕಾತ್‌ನ ಗಡಿಗಳನ್ನು ಪ್ರವಾದಿ ವರ್ಯರು(ಸ) ತೋರಿಸಿದ್ದಾರೆ.
3. ಆಫಾಕ್- ಹರಮ್ ಮತ್ತು ಹಿಲ್ಲ್‌ಗಳನ್ನು ಬಿಟ್ಟು ಲೋಕದ ಇತರ ಭಾಗ ಗಳಲ್ಲಿರುವವರನ್ನು 'ಆಫಾಕೀ'ಗಳೆನ್ನುತ್ತಾರೆ. ಭಾರತದಿಂದ ಬರುವವರು ಆಫಾಕೀಗಳಾಗಿದ್ದಾರೆ.

## ಮೀಕಾತ್‌ಗಳ ವಿವರ

ಮೀಕಾತ್‌ನಲ್ಲಿ ಎರಡು ವಿಧಗಳಿವೆ: 1) ಮೀಕಾತ್ ಝಮಾನೀ (ಕಾಲ ಸೂಚಕ ಮೀಕಾತ್). 2) ಮೀಕಾತ್ ಮಕಾನೀ (ಸ್ಥಾನ ಸೂಚಕ ಮೀಕಾತ್) ವಸ್ತುತಃ ನಿಶ್ಚಿತ ಸ್ಥಾನವನ್ನು ಮೀಕಾತ್ ಎನ್ನಲಾಗುತ್ತದೆ.

ಮೀಕಾತ್ ಝಮಾನೀ- ಹಜ್ಜ್ ಕರ್ಮಗಳಿಗಾಗಿ ತಿಂಗಳುಗಳು ಮತ್ತು ದಿನಗಳು ನಿಶ್ಚಿತವಾಗಿವೆ. ಶವ್ವಾಲ್, ದುಲ್‌ಕಅದಃ ತಿಂಗಳುಗಳು ಮತ್ತು ದುಲ್‌ಹಜ್ಜ್ ತಿಂಗಳ ಪ್ರಥಮ ಹತ್ತುದಿನಗಳು ಮೀಕಾತ್ ಝಮಾನೀ ಆದುದರಿಂದ ಈ ತಿಂಗಳುಗಳಿಗೆ ಮುಂಚೆ ಹಜ್ಜ್‌ನ ಇಹ್ರಾಮ್ ಸಿಂಧುವಲ್ಲ.

ಅನೇಕ ಹಾಜಿಗಳು ರಮಝಾನ್ ತಿಂಗಳಲ್ಲಿ ಉಮ್ರಾ ಮಾಡುವ ಸಂಕಲ್ಪದೊಂದಿಗೆ ಹೋಗುತ್ತಾರೆ. ಉಮ್ರಾ ಮಾಡಿ ಅಲ್ಲೇ ಹಜ್ಜ್‌ನ ನಿರೀಕ್ಷೆಯಲ್ಲಿ ಉಳಕೊಳ್ಳುತ್ತಾರೆ.

ಇಂತಹವರು ಶವ್ವಾಲ್ ತಿಂಗಳಲ್ಲಿ "ತಮತ್ತುಅ್ ಹಜ್ಜ್"ನ ಸಂಕಲ್ಪ ಮಾಡಿ ಇನ್ನೊಂದು ಉಮ್ರಾ ಮಾಡಿಕೊಳ್ಳಬೇಕು. ಏಕೆಂದರೆ ರಮಝಾನ್ ತಿಂಗಳು ಹಜ್ಜ್‌ನ ಋತುವಿನಲ್ಲಿ ಸೇರುವುದಿಲ್ಲ.

ಮೀಕಾತ್ ಮಕಾನೀ- ಇದು ಹಜ್ಜ್ ಮತ್ತು ಉಮ್ರಾ ಮಾಡಲಿಕ್ಕಾಗಿ ಇಹ್ರಾಮ್ ಕಟ್ಟಲು ನಿಶ್ಚಯಿಸಲಾದ ಸ್ಥಳ. ಹಜ್ಜ್ ಮತ್ತು ಉಮ್ರಾ ಮಾಡುವ ಸಂಕಲ್ಪದೊಂದಿಗೆ ಬರುವವರು ನಿಶ್ಚಿತ ಮೀಕಾತ್‌ನಿಂದ ಇಹ್ರಾಮ್ ಕಟ್ಟದೆ ಹರಮಿನೊಳಗೆ ಪ್ರವೇಶಿಸ ಬಾರದು. ಹಜ್ಜ್ ಅಥವಾ ಉಮ್ರಾದ ಹೊರತು ಚಿಕಿತ್ಸೆ, ವ್ಯಾಪಾರ ಮತ್ತು ಭೇಟಿಯೇ ಮೊದಲಾದ ಇತರ ಖಾಸಗಿ ಉದ್ದೇಶಗಳಿಗಾಗಿ ಮಕ್ಕಾಕ್ಕೆ ಹೋಗುವವರು ಮೀಕಾತ್‌ನೊಳಗೆ ಹೋಗುವಾಗ ಇಹ್ರಾಮ್ ಕಟ್ಟಬೇಕಾಗಿಲ್ಲ.

ಮಕ್ಕಾಕ್ಕೆ ಬರುವ ಹಾಜಿಗಳಿಗೆ ಪ್ರವಾದಿವರ್ಯರು(ಸ) ಸೂಚಿಸಿರುವ ಮೀಕಾತ್‌ಗಳನ್ನು ಕೆಳಗೆ ಕೊಡಲಾಗಿದೆ:

1. **ದುಲ್‌ಹುಲೈಫ:** ಇದು ಮದೀನಾ ಅಥವಾ ಆ ದಾರಿಯಾಗಿ ಬರುವ ಸಕಲ ಹಾಜಿಗಳ ಮೀಕಾತ್. ದುಲ್ ಹುಲೈಫ ಎಂಬ ಸ್ಥಳವು ಮದೀನಾದಿಂದ 8 ಕಿ.ಮೀ. ದೂರ ಮತ್ತು ಮಕ್ಕಾದಿಂದ 450 ಕಿ.ಮೀ. ದೂರದಲ್ಲಿದೆ. ಇದನ್ನು ಈಗ 'ಬಿಅ್‌ರ್ ಅಲೀ' ಎನ್ನುತ್ತಾರೆ. ಇದು ಇರುವ ಪ್ರದೇಶಕ್ಕೆ 'ಅಕೀಕ್ ಕಣಿವೆ' ಎಂದು ಹೆಸರು.

2. **ಜುಹ್‌ಫಾ:** ಇದು ಮಕ್ಕಾದಿಂದ ವಾಯುವ್ಯ ದಿಕ್ಕಿಗೆ 187 ಕಿ.ಮೀ ದೂರದಲ್ಲಿದೆ. ಸಿರಿಯಾ, ಈಜಿಪ್ಟ್ ಮತ್ತು ಪಶ್ಚಿಮ ದೇಶಗಳಿಂದ ಬರುವ ಹಾಜಿಗಳಿಗೆ ಇದು ಮೀಕಾತ್.

3. **ಕರ್ನುಲ್ ಮನಾಝಿಲ್:** ಅದು ತಾಯಿಫ್‌ನ ಬಳಿಯಲ್ಲಿದ್ದು ಮಕ್ಕಾದಿಂದ 94 ಕಿ.ಮೀ. ದೂರದಲ್ಲಿದೆ. ಇಂದು ಇದು 'ಸೈಲ್' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದು 'ನಜ್ದ್' ಮತ್ತು ಆ ಕಡೆಗಿರುವವರ ಮೀಕಾತ್.

4. **ಯಲಮ್‌ಲಮ್:** ಇದನ್ನು 'ಸಅದಿಯ' ಎಂದೂ ಕರೆಯುತ್ತಾರೆ. ಇದು 'ತಿಹಾಮಾ'ದ ಪರ್ವತಗಳಲ್ಲೊಂದಾಗಿದ್ದು ಮಕ್ಕಾದಿಂದ ಸುಮಾರು 60 ಕಿ.ಮೀ ದಕ್ಷಿಣಕ್ಕಿದೆ. ಇದು ಭಾರತ, ಪಾಕಿಸ್ತಾನ, ಇಂಡೋನೇಶಿಯಾ, ಚೀನಾ ಮತ್ತು ಯಮನ್ ಕಡೆಯಿಂದ ಬರುವವರ ಮೀಕಾತ್.

5. **ದಾತು ಇರಕ್:** ಇದು ಮಕ್ಕಾದಿಂದ 94 ಕಿ.ಮೀ ಈಶಾನ್ಯ ದಿಕ್ಕಿಗಿದೆ. ಇರಾಕ್, ಇರಾನ್ ಮತ್ತು ಈಶಾನ್ಯ ಕಡೆಯಿಂದ ಬರುವವರಿಗೆ ಇದು ಮೀಕಾತ್.

ಹಿಲ್ಲೀಗಳ ಮತ್ತು ಹರಮೀಗಳ ಮೀಕಾತ್ ಅವರ ವಾಸಸ್ಥಳವೇ ಆಗಿದೆ. ಹಜ್ಜ್ ಅಥವಾ ಉಮ್ರಾದ ಸಂಕಲ್ಪ ಮಾಡಿ ನೆಲ ಮಾರ್ಗವಾಗಿ ಅಥವಾ ವಾಯು ಮಾರ್ಗವಾಗಿ

ಹೋಗುವವರು ತಂತಮ್ಮ ಮೀಕಾತನ್ನು ಹಾದು ಹೋಗುವಾಗ ಅಲ್ಲಿಂದಲೇ ಇಹ್ರಾಮ್ ಕಟ್ಟಿಕೊಳ್ಳಬೇಕು. ಅನ್ಯಥಾ ದಮ್(ಪ್ರಾಣಿಬಲಿ) ಕೊಡಬೇಕಾಗುವುದು.

ಭಾರತ ಮತ್ತು ಪಾಕಿಸ್ತಾನಗಳ ಮೀಕಾತ್ 'ಯಲಮ್‌ಲಮ್.' ಇದು ಯಮನಿನವರ ಮೀಕಾತ್ ಕೂಡಾ ಆಗಿದೆ. ಹಿಂದೆ ಅದರ ಸುತ್ತಮುತ್ತಲ ಪ್ರದೇಶದಿಂದ ಹಡಗುಗಳು ಹೋಗುತ್ತಿದ್ದುವು. ಈಗ ಹಡಗು ಮಾರ್ಗ ಬದಲಾಗಿದೆ. ಹೊಸದಾರಿಯು 'ಯಲಮ್‌ಲಮ್'ನ ಪರಿಸರದಲ್ಲಿಲ್ಲ. ಆದುದರಿಂದ ಈಗ ಜಲಮಾರ್ಗವಾಗಿ ಹೋಗುವವರು ಜಿದ್ದಾ ತಲಪಿದ ಬಳಿಕ ಇಹ್ರಾಮ್ ಕಟ್ಟಿದರೆ ಸಾಕು. ವಾಯು ಮಾರ್ಗವಾಗಿ ಹೋಗುವವರು ವಿಮಾನ ವನ್ನೇರುವ ಮುಂಚೆಯೇ ಇಹ್ರಾಮ್ ಕಟ್ಟಿಕೊಳ್ಳಬೇಕು. ಏಕೆಂದರೆ ವಿಮಾನದಲ್ಲಿರುವಾಗ ಮೀಕಾತನ್ನು ಗುರುತಿಸಲು ಸಾಧ್ಯವಿಲ್ಲ. ಒಂದು ವೇಳೆ ಗುರುತಿಸಿದರೂ ವಿಮಾನವು ಸೆಕೆಂಡುಗಳಲ್ಲಿ ಅದನ್ನು ಹಾದು ಹೋಗಿ ಬಿಡುತ್ತದೆ. ಆದರೆ ಕೆಲವು ಕರ್ಮಶಾಸ್ತ್ರಜ್ಞರು ಮೀಕಾತಿನಿಂದಲೇ ನಿಯ್ಯತ್ ಮಾಡಿ ತಲ್ಬಿಯ ಆರಂಭಿಸಬೇಕೆಂದೂ ಇವುಗಳನ್ನು ಮೊದಲಾಗಿ ಮಾಡುವುದು ಸೂಕ್ತವಲ್ಲವೆಂದೂ ಹೇಳುತ್ತಾರೆ.

## ಸಿದ್ಧತೆ

ಹಜ್ಜ್ ಪ್ರಯಾಣದ ಅನುಗ್ರಹ ಪ್ರಾಪ್ತವಾದವನು ನಿಜಕ್ಕೂ ಭಾಗ್ಯಶಾಲಿ. ಈ ಪ್ರಯಾಣವನ್ನು ಪುಣ್ಯಕಾರ್ಯಗಳೊಂದಿಗೂ ಧರ್ಮನಿಷ್ಠೆಯೊಂದಿಗೂ ಕಳೆದವನಂತೂ ಸಕಲ ಸೌಭಾಗ್ಯಗಳನ್ನು ಹೊಂದಿದಂತೆಯೇ ಸರಿ.

ಒಬ್ಬ ಮುಸ್ಲಿಮನ ಮೇಲೆ ಹಜ್ಜ್ ಕರ್ಮ ಕಡ್ಡಾಯಗೊಂಡ ಬಳಿಕ ಕಾಲಹರಣ ಮಾಡಬಾರದು. ಅಲ್ಲಾಹನ ಮೇಲೆ ಭರವಸೆ ಇರಿಸಿ, ಯಾತ್ರೆಗೆ ಸಿದ್ಧತೆ ಮಾಡಬೇಕು.

ಹಜ್ಜ್ ಯಾತ್ರಿಕನಿಗೆ ಪ್ರಥಮತಃ ಬೇಕಾದುದು ಸಂಕಲ್ಪ ಶುದ್ಧಿ. ಅಲ್ಲಾಹನ ಸಂಪ್ರೀತಿ ಪ್ರಾಪ್ತಿಯ ಬಯಕೆ. ಒಂದು ಕಡ್ಡಾಯ ವಿಧಿಯ ಪಾಲನೆಯ ಹೊರತು ಬೇರಾವ ಉದ್ದೇಶವನ್ನೂ ಅವನು ಇಟ್ಟುಕೊಳ್ಳಬಾರದು. ಪ್ರವಾಸ, ಹವಾ ಬದಲಾವಣೆ, ಹಾಜಿ ಎಂಬ ಬಿರುದನ್ನು ಗಳಿಸುವುದೇ ಮೊದಲಾದ ಉದ್ದೇಶಗಳನ್ನಿರಿಸಿಕೊಂಡರೆ, ಅವನ ಮೇಲಿನ ನಿರ್ಬಂಧವೇನೋ ಸಂದಾಯವಾಗುವುದು. ಆದರೆ ಪುಣ್ಯಫಲ ಸಿಗಲಾರದು.

ಸಂಕಲ್ಪ ಶುದ್ಧಿಯ ನಂತರ ಸಕಲ ವಿಧದ ಶಿರ್ಕ್ ಮತ್ತು ಪಾಪಕಾರ್ಯಗಳಿಂದ ಹೃತ್ಪೂರ್ವಕ ಪಶ್ಚಾತ್ತಾಪಪಟ್ಟು, ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡಬೇಕು. ಮುಂದೆ ಶಿರ್ಕ್‌ಗೆ(ಬಹುದೇವತ್ವಕ್ಕೆ) ಸಂಬಂಧಿಸಿದ ಎಲ್ಲ ಆಚಾರ-ವಿಚಾರಗಳಿಂದಲೂ ಪಾಪ ಕಾರ್ಯಗಳಿಂದಲೂ ದೂರವಿರುವೆನೆಂಬ ದೃಢನಿರ್ಧಾರ ಮಾಡಿಕೊಳ್ಳಬೇಕು. ಎಷ್ಟೋ ಹಾಜಿಗಳು ಅಲ್ಲಾಹನ ಭವನದ ಯಾತ್ರಿಕರಾಗಿಯೂ ದೇವೇತರರ ಭಕ್ತರಾಗಿರುತ್ತಾರೆ, ಇದರಿಂದ ಹಜ್ಜ್ ವ್ಯರ್ಥವಾಗಿ ಬಿಡುತ್ತದೆ.

ತನ್ನ ಮೇಲೆ ಯಾರದಾದರೂ ಶಾರೀರಿಕ ಅಥವಾ ಸಾಂಪತ್ತಿಕ ಋಣವಿದ್ದರೆ ಅದರ ಸಂದಾಯ ಮಾಡಬೇಕು. ಇಲ್ಲವೇ ಸಂಬಂಧ ಪಟ್ಟವರಿಂದ ಮನ್ನಾ ಮಾಡಿಸಿಕೊಳ್ಳಬೇಕು. ಅಂತಹವರು ಮೃತರಾಗಿದ್ದರೆ ಅವರ ಉತ್ತರಾಧಿಕಾರಿಗಳಿಗೆ ಸಲ್ಲಿಸಬೇಕು. ಋಣ ಸಂದಾಯಕ್ಕಾಗಿ ಎಷ್ಟು ಹುಡುಕಿದರೂ ಸಂಬಂಧಪಟ್ಟ ವ್ಯಕ್ತಿ ಸಿಗದೆ ಹೋದರೆ, ಅವರ ಪರವಾಗಿ ದಾನ ಮಾಡಿಬಿಡಬೇಕು. ಅಂತೂ ಜನರ ಯಾವ ಋಣವೂ ತನ್ನ ಮೇಲೆ ಬಾಕಿಯಾಗದಂತೆ ನೋಡಿಕೊಳ್ಳಬೇಕು. ಆರಾಧನೆಗಳಲ್ಲಿ ಲೋಪ ಬಂದಿದ್ದರೆ ಅವುಗಳ 'ಕಝಾ' ನೆರವೇರಿಸಿ, ಮುಂದೆ ಹೀಗೆ ಮಾಡಲಾರೆನೆಂದು ದೃಢನಿರ್ಧಾರ ಮಾಡಿಕೊಳ್ಳಬೇಕು.

ಅನಂತರ, ಮಾತಾಪಿತರು ಜೀವಂತರಾಗಿದ್ದರೆ ಅವರ ಅನುಮತಿ ಪಡೆದುಕೊಳ್ಳಬೇಕು. ಅವರಿಗೆ ಸೇವೆಯ ಅಗತ್ಯವಿದ್ದಾಗ ಅವರ ಅನುಮತಿಯಿಲ್ಲದೆ ಯಾತ್ರೆಗೆ ಹೋಗುವುದು ಸರಿಯಲ್ಲ. ಅದೇ ರೀತಿ ಪತ್ನಿ ಮತ್ತು ಮಕ್ಕಳ (ಆಶ್ರಿತರ) ಜೀವನೋಪಾಯದ ವ್ಯವಸ್ಥೆ ಮಾಡಬೇಕು. ಸದ್ಯದಲ್ಲೆ ಸಂದಾಯವಾಗಬೇಕಾದ ಸಾಲವಿದ್ದರೆ ಸಾಲನೀಡಿದವನ ಅನುಮತಿ ಇಲ್ಲದೆ ಹೋಗುವುದೂ ಸರಿಯಲ್ಲ. ಸಾಲ ನೀಡಿದವನು ಅವಧಿ ಕೊಟ್ಟಿದ್ದರೆ ಅಥವಾ ಸಾಲಗಾರನು ಜಾಮೀನಿನ ವ್ಯವಸ್ಥೆ ಮಾಡಿದ್ದರೆ ಸರಿ.

ಬೇರೆಯವರ ಅಮಾನತ್ (ನ್ಯಾಸ) ಅಥವಾ ಎರವಲು ಪಡೆದ ವಸ್ತುವೇನಾದರೂ ಇದ್ದರೆ ಅದನ್ನು ಹಿಂದಿರುಗಿಸಬೇಕು. ತನಗೆ ಬರತಕ್ಕ ಹಾಗೂ ಸಂದಾಯವಾಗತಕ್ಕ ಸಕಲ ವಸ್ತುಗಳ ಲೆಕ್ಕವನ್ನು ವಿವರವಾಗಿ ಬರೆದು ಪ್ರಾಮಾಣಿಕನೂ ನ್ಯಾಯಶೀಲನೂ ಆದ ಒಬ್ಬನನ್ನು ಪ್ರತಿನಿಧಿಯನ್ನಾಗಿ ನೇಮಿಸಿಕೊಳ್ಳಬೇಕು.

ಹಲಾಲ್ ರೂಪದಲ್ಲಿ ಸಂಪಾದಿಸಿದ ಸಂಪತ್ತನ್ನೇ ಇದಕ್ಕಾಗಿ ವಿನಿಯೋಗಿಸಬೇಕು. ಹರಾಮ್ ರೂಪದಲ್ಲಿ ಸಂಪಾದಿಸಿದ ಸಂಪತ್ತಿನಿಂದ ಮಾಡಿದ ಹಜ್ಜ್‌ನಿಂದ ತನ್ನ ಮೇಲಿರುವ ನಿರ್ಬಂಧವೇನೋ ಇಳಿದು ಹೋಗುವುದು. ಆದರೆ ಅದು ಸ್ವೀಕೃತವಾಗುವುದಿಲ್ಲ.

ಇಂದು ಗಡ್ಡ ಬೋಳಿಸುವುದು ಹಾಜಿಗಳಿಗೂ ಒಂದು ಫ್ಯಾಶನ್ ಆಗಿ ಬಿಟ್ಟಿದೆ. "ಮುಶ್ರಿಕರ ರೂಢಿಗೆ ವಿರುದ್ಧವಾಗಿ ಮೀಸೆಯನ್ನು ಸಣ್ಣದು ಮಾಡಿ ಗಡ್ಡವನ್ನು ಬೆಳೆಸಿರಿ" ಎಂದು ಪ್ರವಾದಿವರ್ಯರು(ಸ) ಹೇಳಿದ್ದಾರೆ. (ಬುಖಾರಿ) ಅವರ ಈ ಆದೇಶವನ್ನು ಪಾಲಿಸಬೇಕು.

ಯಾತ್ರೆಗೆ ಬೇಕಾದ ಆರ್ಥಿಕ ಬಲವುಳ್ಳವರು ಮಾತ್ರ ಹಜ್ಜ್ ಯಾತ್ರೆ ಮಾಡಿದರೆ ಸಾಕೆಂದು ಹದೀಸ್‌ನಿಂದ ವ್ಯಕ್ತವಾಗುತ್ತದೆ. ಸಾಲ ಪಡೆದು ಹಜ್ಜ್ ಯಾತ್ರೆ ಮಾಡಬೇಕಾಗಿಲ್ಲ. ಮಕ್ಕಾ ತಲಪಿದ ಬಳಿಕ ಹಣದ ಅಡಚಣೆಯುಂಟಾದರೆ ಸಾಲ ಪಡೆಯಬಹುದು. ಮನೆಗೆ ಮರಳಿದೊಡನೆ ಅದನ್ನು ಸಂದಾಯ ಮಾಡಿಬಿಡಬೇಕು. ಕಷ್ಟಕಾಲದಲ್ಲಿ ಸಹಾಯಕನಾಗತಕ್ಕ, ಧೈರ್ಯ ಕೊಡತಕ್ಕ ಹಜ್ಜ್ ನಿಯಮಗಳನ್ನು ಬಲ್ಲ ನಿಷ್ಠಾವಂತ ಸಹ ಪ್ರಯಾಣಿಕನನ್ನು ಆಯ್ದುಕೊಳ್ಳಬೇಕು. ಅವನು ವಿದ್ವಾಂಸನಾಗಿದ್ದರೆ ಬಹಳ ಉತ್ತಮ.

ಹಜ್ಜ್ ಯಾತ್ರೆಗೆ ಸಂಬಂಧಿಸಿದ ಎಲ್ಲ ವಿಧಿ ಕರ್ಮಗಳನ್ನು ಬಲ್ಲವರೊಡನೆ ಕೇಳಿಯೂ ವಿಶ್ವಸ್ಥ ಗ್ರಂಥಗಳನ್ನು ಓದಿಯೂ ಚೆನ್ನಾಗಿ ತಿಳಿದುಕೊಳ್ಳಬೇಕು. ಅಜ್ಞಾನದಿಂದ ಹಜ್ಜ್ ಯಾತ್ರೆಯೇ ದೋಷಪೂರ್ಣ ಹಾಗೂ ವ್ಯರ್ಥ ಆಗಿ ಬಿಡಬಹುದು.

ಈ ಯಾತ್ರೆಯಲ್ಲಿ ವಾಹನಗಳ ಹಾಗೂ ಸ್ಥಳೀಯ ನಿಯಮಗಳ ಉಲ್ಲಂಘನೆ ಮಾಡದೆ, ಅವುಗಳನ್ನು ಪಾಲಿಸಬೇಕು.

ಹಜ್ಜ್ ಯಾತ್ರೆಯಲ್ಲಿ ಖರ್ಚು ಮಾಡುವಾಗ ಲೋಭ ತೋರಬಾರದು. ದುಂದು ವೆಚ್ಚವನ್ನೂ ಮಾಡಬಾರದು. ತನ್ನ ಆರ್ಥಿಕ ಸಾಮರ್ಥ್ಯಕ್ಕನುಸಾರ ಖರ್ಚು ಮಾಡಬೇಕು. ಈ ಯಾತ್ರೆಯಲ್ಲಿ ವ್ಯಯಿಸುವ ಸಂಪತ್ತಿಗೆ ಏಳು ಪಟ್ಟು ಹೆಚ್ಚು ಪುಣ್ಯ ಫಲ ಸಿಗುವುದು. ಆದರೆ ಅಲ್ಲಿ ಖರೀದಿಸುವ ಭೋಗ ವಸ್ತುಗಳು ಇದರಲ್ಲಿ ಸೇರುವುದಿಲ್ಲ.

ಈ ಯಾತ್ರೆಯುದ್ದಕ್ಕೂ ದೇವ ಸಂಪ್ರೀತಿಯ ಬಯಕೆ ಮತ್ತು ಏಕಾಗ್ರತೆ ಇರಬೇಕಾದುದು ಅಗತ್ಯ. ಇವುಗಳಿಗೆ ತಡೆಯುಂಟುಮಾಡುವ ವಿಷಯಗಳನ್ನು ವರ್ಜಿಸಬೇಕು. ಉದಾ: ಹೊಟ್ಟೆ ತುಂಬಾ ಉಣ್ಣುವುದು, ಮೃಷ್ಟಾನ್ನ ಭೋಜನ, ಶೃಂಗಾರದ ಉಡುಗೆ ತೊಡುಗೆ, ಅನಗತ್ಯ ಅಲೆದಾಟ ಮೊದಲಾದವುಗಳನ್ನು ಬಿಡಬೇಕು.

ಯಾತ್ರೆಗೆ ಹೊರಡುವಾಗ ಮನೆಯಿಂದ ಸಂತೋಷದಿಂದ ಹೊರಡಬೇಕು. ಖಿನ್ನರಾಗಿ, ಮುಖ ಬಾಡಿಸಿಕೊಂಡು ಹೊರಡಬಾರದು. ಹೊರಡುವುದಕ್ಕೆ ಮುಂಚೆಯೂ ಅನಂತರವೂ ದಾನಧರ್ಮಗಳನ್ನು ಮಾಡಬೇಕು. ನಫಿಲ್ ನಮಾಝ್, ಕುರ್‌ಆನ್ ಪಠಣ, ದರೂದ್ ಮತ್ತು ದುಆ ಇತ್ಯಾದಿಗಳನ್ನು ಮಾಡಬೇಕು.

ಮನೆಯಿಂದ ಹೊರಡುವಾಗ ಆಪ್ತರಿಂದ, ಗೆಳೆಯರಿಂದ, ನೆರೆ ಹೊರೆಯವರಿಂದ ಕ್ಷಮೆ ಕೇಳಿ ತಮಗಾಗಿ ದುಆ ಮಾಡಬೇಕೆಂದು ವಿನಂತಿಸಿಕೊಳ್ಳಬೇಕು. ಮರಳಿ ಬಂದಾಗ ಇವರೆಲ್ಲರೂ ನಿಮ್ಮನ್ನು ಭೇಟಿಯಾಗಲು ಬರುವರು.

ತನ್ನವರಿಂದ ಬೀಳ್ಕೊಳ್ಳುವಾಗ ಹೀಗೆ ದುಆ ಮಾಡಬಹುದು

أَسْتَوْدِعُكُمُ اللّٰهَ الَّذِي لَا تَضِلُّ وَدَائِعُهُ

"ಅಸ್ತೌದಿ ಉಕುಮುಲ್ಲಾಹುಲ್ಲದೀ ಲಾ ತದಿಲ್ಲು ವದಾಇಉಹೂ" (ನಾನು ನಿಮ್ಮನ್ನು ಅಲ್ಲಾಹನ ವಶಕ್ಕೆ ಒಪ್ಪಿಸುತ್ತೇನೆ. ಅವನಿಗೆ ಒಪ್ಪಿಸಿದ ವಸ್ತು ನಷ್ಟವಾಗುವುದಿಲ್ಲ.)

ಬೀಳ್ಕೊಡುವವರು ಈ ರೀತಿ ಪ್ರಾರ್ಥಿಸಬೇಕು.

أَسْتَوْدِعُ اللّٰهَ دِيْنَكَ وَأَمَانَتَكَ وَخَوَاتِيْمَ عَمَلِكَ

"ಅಸ್ತೌದಿಉಲ್ಲಾಹ ದೀನಕ ವ ಅಮಾನತಕ ವ ಖವಾತೀಮ ಅಮಲಕ."

ನಿಮ್ಮ ಧರ್ಮ, ನಿಮ್ಮ ಪ್ರಾಮಾಣಿಕತೆ ಮತ್ತು ನಿಮ್ಮ ಕರ್ಮಗಳ ಪರಿಣಾಮಗಳನ್ನು ನಾನು ಅಲ್ಲಾಹನಿಗೆ ವಹಿಸಿಕೊಡುತ್ತಿದ್ದೇನೆ.

ಬಸ್ಸು, ಕಾರು, ಹಡಗು, ವಿಮಾನ ಮುಂತಾದ ವಾಹನಗಳನ್ನೇರುವಾಗಲೆಲ್ಲ ಈ ದುಆ ಮಾಡಬೇಕು-

سُبْحٰنَ الَّذِىْ سَخَّرَ لَنَا هٰذَا وَمَا كُنَّا لَهُ مُقْرِنِيْنَ وَاِنَّا اِلٰى رَبِّنَا لَمُنْقَلِبُوْنَ

"ಸುಬ್‌ಹಾನಲ್ಲದೀ ಸಖ್ಖರ ಲನಾ ಹಾದಾ ವಮಾ ಕುನ್ನಾಲಹೂ ಮುಕ್ರಿನೀನ ವ ಇನ್ನಾ ಇಲಾ ರಬ್ಬಿನಾ ಲಮುಂಕಲಿಬೂನ್" (ಇದನ್ನು ನಮ್ಮ ಅಧೀನಕ್ಕೆ ಕೊಟ್ಟವನು ಪರಮ ಪಾವನನು. ಅವನ ಮಹಿಮೆಯಿಲ್ಲದೆ ನಾವು ಇದನ್ನು ನಮ್ಮ ಹತೋಟಿಗೆ ತರಲು ಶಕ್ತರಾಗುತ್ತಿರಲಿಲ್ಲ. ನಿಶ್ಚಯವಾಗಿಯೂ ನಮಗೆ ನಮ್ಮ ಪ್ರಭುವಿನ ಕಡೆಗೆ ಹೋಗಲಿಕ್ಕಿದೆ.)

ಈಗ ದೇವ ಮಾರ್ಗದಲ್ಲಿ ಹೊರಟಾಯಿತು. ಇನ್ನು ಪ್ರಯಾಣದಲ್ಲಾಗಲಿ ತಂಗಿದಲ್ಲಾಗಲಿ ಅನವಶ್ಯಕ ಮಾತುಗಳನ್ನಾಡಬಾರದು. ಸದಾ ದೇವಸ್ಮರಣೆ, ದಿಕ್ರ್, ಕುರ್‌ಆನ್ ಪಠಣ ಮತ್ತು ಸಲಾತ್ ಪಠಣಗಳಲ್ಲೇ ನಿರತರಾಗಿರಬೇಕು. ಸಮಯ ಸಿಕ್ಕಿದಾಗಲೆಲ್ಲ ನಮಾಝ್ ಮತ್ತು ಧಾರ್ಮಿಕ ಗ್ರಂಥಗಳ ಅಧ್ಯಯನ ಮಾಡಬೇಕು. ನಿಮ್ಮ ಕರ್ಮಶುದ್ಧಿ ಮತ್ತು ಪರಲೋಕದ ಚಿಂತೆಯಲ್ಲೇ ಕಳೆಯಬೇಕು.

ಪ್ರಯಾಣದಲ್ಲಿ ವಿವಿಧ ಮನೋವೃತ್ತಿಯವರು ಜೊತೆಗಿರುತ್ತಾರೆ. ಯಾರಿಂದಾದರೂ ಏನಾದರೂ ಅತಿಕ್ರಮವುಂಟಾದಾಗ ನಮ್ಮ ಸಭ್ಯತೆ ಸಹನೆಗಳನ್ನು ಕೈ ಬಿಡಬಾರದು. ಬಯ್ಯಾಟ, ಸಿಟ್ಟು, ಚಾಡಿ, ನಿಂದೆ, ಅಶ್ಲೀಲಮಾತು, ಹಾಸ್ಯ, ಬಂಡಾಯದ ಮಾತು ಹಾಗೂ ಗಾನ ವಾದ್ಯಾದಿಗಳನ್ನು ವರ್ಜಿಸಬೇಕು. ವೃದ್ಧರಿಗೆ, ದುರ್ಬಲರಿಗೆ ಮತ್ತು ರೋಗಿಗಳಿಗೆ ಸಾಧ್ಯವಿದ್ದಲ್ಲೆಲ್ಲ ಸಹಾಯ ಮಾಡಬೇಕು. ಸ್ತ್ರೀ ಪುರುಷರಿರುವ ಜನಸಂದಣಿಯಲ್ಲಿರುವಾಗ ದೃಷ್ಟಿಯನ್ನು ಕೆಳಗಿರಿಸಿಕೊಳ್ಳಬೇಕು. ಪ್ರಯಾಣ ಕಾಲದಲ್ಲಿ ಸಾಧ್ಯವಿದ್ದಾಗಲೆಲ್ಲ ನಮಾಝನ್ನು ಸಾಮೂಹಿಕವಾಗಿ ನೆರವೇರಿಸಬೇಕು. ಈ ಯಾತ್ರೆಯಲ್ಲಿ ಸಜ್ಜನರ ಒಡನಾಟ ಸಿಕ್ಕಿದವರು ನಿಜವಾಗಿಯೂ ಭಾಗ್ಯಶಾಲಿಗಳು.

## ಇಹ್ರಾಮ್

ಹಜ್ಜ್ ಮತ್ತು ಉಮ್ರಾಗಳಿಗೆ ಪ್ರಥಮ ಶರತ್ತು ಇಹ್ರಾಮ್ ಆಗಿರುತ್ತದೆ. ಯಾತ್ರಿಕನು ಹಜ್ಜ್ ಮತ್ತು ಉಮ್ರಾದ ಸಂಕಲ್ಪ ಮಾಡಿ ತಲ್ಬಿಯ ಪಠಿಸುವುದರೊಂದಿಗೆ ತನಗೆ ಹಲಾಲ್ ಮತ್ತು ಸಮ್ಮತ ಆಗಿರುವ ಕೆಲವನ್ನು ಹರಾಮ್‌ಗೊಳಿಸಿಕೊಳ್ಳುತ್ತಾನೆ. ಆದುದರಿಂದಲೇ ಇದನ್ನು ಇಹ್ರಾಮ್ ಎನ್ನಲಾಗಿದೆ. ಅದರ ಸಂಕೇತವಾಗಿರುವ ಎರಡು ತುಂಡು ಬಟ್ಟೆಗೂ ಇಹ್ರಾಮ್ ಎನ್ನುತ್ತಾರೆ. ನಮಾಝ್‌ನ ಆರಂಭವು ತಕ್ಬೀರತುಲ್ ಇಹ್ರಾಮಿನಿಂದ ಆಗುವಂತೆಯೇ ಹಜ್ಜ್ ಮತ್ತು ಉಮ್ರಾಗಳ ಆರಂಭ ಇಹ್ರಾಮಿನಿಂದಾಗುತ್ತದೆ.

## ಇಹ್ರಾಮ್ ಕಟ್ಟುವ ಕ್ರಮ

ಇಹ್ರಾಮ್ ಕಟ್ಟುವ ಸಂಕಲ್ಪ ಮಾಡಿ ಮೊದಲು ಸ್ನಾನ ಮಾಡಿಕೊಳ್ಳಬೇಕು. ಇದು ಸಾಧ್ಯವಾಗದಿದ್ದರೆ ವುಝೂ ಸಾಕು. ಕ್ಷೌರ ಮಾಡಿಸಿ, ಉಗುರುಗಳನ್ನೂ, ಕಂಕುಳದ ಮತ್ತು ನಾಭಿಯ ಕೆಳಗಿನ ರೋಮಗಳನ್ನೂ ಮೊದಲೇ ತೆಗೆಯಬೇಕು. ಫರ್ಝ್ ನಮಾಝ್‌ನ ಬಳಿಕ ಇಹ್ರಾಮ್ ಕಟ್ಟುವುದು ಉತ್ತಮ. ಅನಂತರ ಸುಗಂಧ ದ್ರವ್ಯಗಳಿದ್ದರೆ ಪೂಸಿ ಇಹ್ರಾಮಿನ ಬಟ್ಟೆಯುಡಬೇಕು. ಇಹ್ರಾಮಿಗೆ ಬೇಕಾದುದು ಎರಡು ತುಂಡು ಹೊಲಿಗೆಯಿಲ್ಲದ ಬಟ್ಟೆಗಳು. ಒಂದು ತುಂಡು ಲುಂಗಿಯಂತೆ ಉಟ್ಟುಕೊಳ್ಳಲಿಕ್ಕೆ, ಇನ್ನೊಂದು ಹೆಗಲ ಮೇಲೆ ಹೊದ್ದು ಕೊಳ್ಳಲಿಕ್ಕೆ. ಇವು ಬಿಳಿ ಆಗಿದ್ದರೆ ಉತ್ತಮ. ಇದಕ್ಕೆ ಹತ್ತಿ ಅಥವಾ ಉಣ್ಣೆಯ ಬಟ್ಟೆ ಆಗಬಹುದು.

ಇಹ್ರಾಮ್ ತೊಟ್ಟ ಬಳಿಕ 2 ರಕಅತ್ ನಫಿಲ್ ನಮಾಝ್ ಮಾಡಬೇಕು. ಸಲಾಮ್ ಆದ ಕೂಡಲೇ ಹಜ್ಜ್ ಅಥವಾ ಉಮ್ರಾದ ನಿಯ್ಯತ್ ಮಾಡಿ ಉಚ್ಚ ಸ್ವರದಿಂದ ತಲ್ಬಿಯ ಹೇಳಬೇಕು.

## ತಲ್ಬಿಯಾ

ತಲ್ಬಿಯಾದ ಪದಗಳು ಹೀಗಿವೆ:

لَبَّيْكَ اَللّٰهُمَّ لَبَّيْكَ لَبَّيْكَ لَا شَرِيْكَ لَكَ لَبَّيْكَ اِنَّ الْحَمْدَ وَالنِّعْمَةَ
لَكَ وَالْمُلْكَ لَا شَرِيْكَ لَكَ

ಲಬ್ಬೈಕಲ್ಲಾಹುಮ್ಮ ಲಬ್ಬೈಕ್, ಲಬ್ಬೈಕ ಲಾ ಶರೀಕ ಲಕ ಲಬ್ಬೈಕ್. ಇನ್ನಲ್ ಹಮ್ದ ವನ್ನಿಅ್‌ಮತ ಲಕ ವಲ್ ಮುಲ್ಕ ಲಾ ಶರೀಕ ಲಕ. (ನಾನು ಹಾಜರಿದ್ದೇನೆ, ಓ ಅಲ್ಲಾಹ್, ನಾನು ಹಾಜರಿದ್ದೇನೆ. (ಹೌದು) ನಾನು ಹಾಜರಿದ್ದೇನೆ. ನಿನಗೆ ಸಹಭಾಗಿ ಯಾರೂ ಇಲ್ಲ. ಇದೋ ಹಾಜರಿದ್ದೇನೆ. ಸಕಲ ಸ್ತುತಿ, ಅನುಗ್ರಹಗಳು ಮತ್ತು ಅಖಿಲ ಪ್ರಭುತ್ವ ನಿನ್ನದು. ಇದರಲ್ಲಿ ನಿನ್ನ ಸಹಭಾಗಿ ಯಾರೂ ಇಲ್ಲ) ಇದನ್ನು ಮೂರು ಬಾರಿ ಹೇಳುವುದು.

ಇನ್ನು ನಿಲ್ಲುವಾಗ, ಕೂರುವಾಗ ಮತ್ತು ಚಲಿಸುವಾಗ ಮುಖ್ಯವಾಗಿ ಬೆಳಗು ಬೈಗುಗಳಲ್ಲಿ, ಸ್ಥಳ ಬದಲಾಗುವಾಗ, ಏರಿಳಿತಗಳಲ್ಲಿ- ಹೀಗೆ ಪ್ರಯಾಣದುದ್ದಕ್ಕೂ ಪುರುಷರು ಉಚ್ಚಸ್ವರದಲ್ಲೂ, ಸ್ತ್ರೀಯರು ಮೆಲು ಧ್ವನಿಯಲ್ಲೂ ತಲ್ಬಿಯಾ ಹೇಳುತ್ತಿರಬೇಕು. ಇಹ್ರಾಮಿನ ಅವಸ್ಥೆಯಲ್ಲಿ ತಲ್ಬಿಯಾಕ್ಕಿಂತ ಮಿಗಿಲಾದ ದಿಕ್ರ್ ಯಾವುದೂ ಇಲ್ಲ.

## ಇಹ್ರಾಮಿನ ಸಾರ

ಯಾವ ಹಾಜಿಯೂ ತಾನುಟ್ಟ ಉಡುಪನ್ನು ಕಳಚಿ ಇಹ್ರಾಮ್ ಕಟ್ಟಿಕೊಳ್ಳದೆ ಮೀಕಾತನ್ನು ದಾಟಿ ಬರಬಾರದು. ಇದೊಂದು ಸಾತ್ವಿಕ ಸಮವಸ್ತ್ರ. ಇದು ಇಹ್ರಾಮಿನ ಪ್ರತ್ಯಕ್ಷ ರೂಪ. ಇದರ ಗೂಢಾರ್ಥವನ್ನು ತಿಳಿಯದಿದ್ದರೆ ಪ್ರಯೋಜನವಿಲ್ಲ.

ಪ್ರತಿಯೊಬ್ಬನೂ ತನ್ನ ಬಾಹ್ಯ ವೇಷ ಭೂಷಣಗಳಲ್ಲಿ ತನ್ನ ಸಹಜತೆಗಿಂತ ಸ್ವಲ್ಪ ಹೆಚ್ಚನ್ನೇ ಸೇರಿಸಿಟ್ಟುಕೊಳ್ಳುತ್ತಾನೆ. ಅಲ್ಲಾಹನು ತನ್ನ ಭವನದ ಸಂದರ್ಶನಾರ್ಥವಾಗಿ ಬರುವ ದಾಸನೊಡನೆ ಹೇಳುವುದೇನು? 'ನೀವೆಲ್ಲ ನನ್ನ ದಾಸರು ಮಾತ್ರ. ಅದಕ್ಕಿಂತ ಹೆಚ್ಚೇನೂ ಆಗಿಲ್ಲ. ನನ್ನ ಸನ್ನಿಧಾನದಲ್ಲಿ ಹಾಜರಾಗ ಬಯಸುವಿರಾದರೆ ಕೇವಲ ನನ್ನ ದಾಸರೆಂಬ ನೆಲೆಯಲ್ಲಿ ಬನ್ನಿರಿ. ನೀವು ಒಂದು ದೇಶದ ಅರಸರಾಗಿರಬಹುದು, ದಂಡನಾಯಕ ರಿರಬಹುದು, ರಾಷ್ಟ್ರಾಧ್ಯಕ್ಷರಿರಬಹುದು, ಪ್ರಧಾನಿ, ಮುಖ್ಯಮಂತ್ರಿ ಅಥವಾ ಇನ್ನಾವುದೇ ಹುದ್ದೆಯವರಿರಬಹುದು, ಏನೇ ಆಗಿದ್ದರೂ ನನ್ನ ದಾಸರೇ ಆಗಿದ್ದೀರಿ. ಆದುದರಿಂದ ನನ್ನ ಸನ್ನಿಧಿಗೆ ಬರುವಾಗ ನಿಮ್ಮ ಸ್ಥಾನಮಾನಗಳನ್ನೆಲ್ಲ ಒಂದು ಬದಿಗಿರಿಸಿ, ಕೇವಲ ನನ್ನ ದಾಸರೆಂಬ ನೆಲೆಯಲ್ಲಿ ಬರಬೇಕು. ಇಹ್ರಾಮಿನ ಈ ಉಡುಪು ಪ್ರತಿಯೊಬ್ಬನನ್ನು ದಾಸ್ಯ ಸ್ಥಾನಕ್ಕೆ ತಂದು ನಿಲ್ಲಿಸಿ ಅವನ ಪ್ರತ್ಯೇಕತೆಯನ್ನು ಅಳಿಸಿ ಬಿಡುತ್ತದೆ. ದೊಡ್ಡ ದೊಡ್ಡ ಸ್ಥಾನದವರನ್ನು ಸಾಮಾನ್ಯ ಮನುಷ್ಯನ ಸ್ಥಾನಕ್ಕೆ ಇಳಿಸಿ ಬಿಡುತ್ತದೆ. ಇಹ್ರಾಮಿನಲ್ಲಿರುವ ಹಾಜಿಗಳ ಸಮೂಹದ ಕಡೆಗೊಮ್ಮೆ ನೋಡಿದರೆ, ಅವರಲ್ಲಿ ಯಾರು ಮೇಲು ಯಾರು ಕೀಳು ಎಂದು ಕಂಡು ಹಿಡಿಯಲಾಗುವುದಿಲ್ಲ. ಧನಿಕ, ಬಡವ, ಅರಸ, ಪ್ರಜೆ, ಅಧಿಕಾರಿ, ನೌಕರ ಎಂಬಿತ್ಯಾದಿ ತಾರತಮ್ಯವೇ ಅಲ್ಲಿ ಕಂಡು ಬರುವುದಿಲ್ಲ. ಎಲ್ಲರೂ ಒಂದೇ ತರದ ಫಕೀರರಾಗಿರುತ್ತಾರೆ. ಇಹ್ರಾಮ್ ಮುಸ್ಲಿಮರ ನಡುವಿನಿಂದ ಜನಾಂಗ, ವರ್ಣ, ವಂಶ, ದೇಶಗಳ ಭಿನ್ನತೆಗಳನ್ನು ಅಳಿಸಿ ಹಾಕುತ್ತವೆ. ನಾವೆಲ್ಲರೂ ಮನುಷ್ಯರು, ಒಂದೇ ಸಮುದಾಯದವರು ಎಂಬ ಭಾವನೆಯನ್ನು ಮುಸ್ಲಿಮರಲ್ಲಿ ಮೂಡಿಸಲು ಇದಕ್ಕಿಂತ ಪರಿಣಾಮಕಾರಿಯಾದುದು ಇನ್ನಾವುದಿದೆ?

ಈ ಇಹ್ರಾಮ್ ಮಾನವನನ್ನು ಮೃಗೀಯ ಸ್ಥಾನದಿಂದ ಮೇಲಕ್ಕೆತ್ತಿ ಮಲಕ್‌ಗಳ ಸ್ಥಾನದ ಸಮೀಪಕ್ಕೆ ತರುತ್ತದೆ. ಈ ಅವಸ್ಥೆಯಲ್ಲಿ ಯಾವ ಜೀವಿಯನ್ನೂ ಕೊಲ್ಲಬಾರದು. ಪ್ರಾಣಿಗಳನ್ನು ಸ್ವತಃ ಬೇಟೆಯಾಡಬಾರದು, ಅಷ್ಟೇ ಅಲ್ಲ ಬೇಟೆಗೆ ಯಾವ ಸಹಕಾರವನ್ನೂ ಕೊಡಬಾರದು. ದೇಹಾಲಂಕಾರವು ನಿಷಿದ್ಧ. ಇತರ ಸಮಯದಲ್ಲಿ ಧರ್ಮಸಮ್ಮತವಾಗಿರುವ ಪತ್ನಿ ಕೂಡಾ ಇಹ್ರಾಮಿನ ವೇಳೆ ನಿಷಿದ್ಧ. ಅವಳ ಕಡೆಗೆ ಕಾಮುಕ ದೃಷ್ಟಿಯನ್ನೂ ಬೀರಬಾರದು. ಅಶ್ಲೀಲ ಮಾತು, ಜಗಳ ಇತ್ಯಾದಿ ಎಲ್ಲವೂ ನಿಷಿದ್ಧ. ಹೆಚ್ಚೇಕೆ, ತನ್ನ ಸೇವಕನನ್ನು ಗದರಿಸುವುದೂ ಸರಿಯಲ್ಲ. ಇದರ ಅರ್ಥವೇನು? ಇಹ್ರಾಮ್ ಕಟ್ಟಿದೊಡನೆ ಅವನು ಸಕಲ ಸುಖ ಭೋಗಗಳನ್ನು ತ್ಯಜಿಸಿ ಬಿಟ್ಟ ಹಾಗೂ ಕಾಮ, ಕ್ರೋಧ, ಲೋಭ, ಮೋಹಗಳಂತಹ ಅರಿ ಷಡ್ವರ್ಗಗಳಿಂದ ದೂರಸರಿದು ಅಲ್ಲಾಹನ ಫಕೀರನಾದನು. ಈಗ ಜಗತ್ತಿನ ಪ್ರತಿಯೊಂದು ಜೀವಿಗೂ ಅವನ ಕಡೆಯಿಂದ ಶಾಂತಿಯ ಸಂದೇಶವಿದೆ. ಅವನಿಂದ ಯಾರಿಗೂ ಯಾವ ವಿಧದಿಂದಲೂ ಹಾನಿ ತಟ್ಟುವುದೆಂಬ ಭಯವಿಲ್ಲ. ಅವನು ಯಾರ ಮಟ್ಟಿಗೂ ಕ್ರೂರಿಯೋ, ಅಕ್ರಮಿಯೋ, ಅಪಕಾರಿಯೋ ಅಲ್ಲ. ಭೋಗ

ವಿಲಾಸಗಳೆಲ್ಲವನ್ನೂ ತ್ಯಜಿಸಿದ ಹಾಗೂ ಮದ, ಅಹಂಕಾರಗಳ ಛಾಯೆಯೂ ಇಲ್ಲದಂತಹ ಶರಣಾರ್ಥಿಯಾಗಲು ಹೋಗುತ್ತಿದ್ದಾನೆ. ಈ ಭಾವವು ಇಹ್ರಾಮಿನ ಜೀವಾಳವಾಗಿದೆ.

ಇದರೊಂದಿಗೇ ತಲ್ಬಿಯಾದಲ್ಲಿ ಹೇಳುವ ಮಾತುಗಳನ್ನು ನೋಡಿರಿ. ಒಡೆಯನು ದಾಸನನ್ನು ಕರೆದಿದ್ದಾನೆ ಮತ್ತು ದಾಸನು 'ಇದೋ ಹಾಜರಾದೆ' ಎನ್ನುತ್ತ ತನ್ನ ಪ್ರಭುವಿನ ಕಡೆಗೆ ಧಾವಿಸಿ ಬರುತ್ತಿದ್ದಾನೆ ಎಂದು ಇದರ ಶಬ್ದಗಳಿಂದಲೇ ವ್ಯಕ್ತವಾಗುವುದಿಲ್ಲವೇ? ಅಲ್ಲಾಹನ ಭವನ(ಕಅಬಾ)ದ ಕಡೆಗೆ ಕರೆ ಬಂತು 'ಇದೋ ಬಂದೆ, ಇದೋ ಹಾಜರಾದೆ' ಎನ್ನುತ್ತ ಅಲ್ಲಿಯ ವರೆಗೂ ಬಂದನು. ಅರಫಾತ್‌ಗೆ ಕರೆ ಬಂತು. ಅಲ್ಲಿಗೂ ಹೋಗಿ, "ಅಲ್ಲಾಹ್ ಹಾಜರಾದೆ" ಎಂದನು. ಮುಝ್ದಲಿಫಾಕ್ಕೆ ಕರೆ ಬಂದು ಅಲ್ಲಿಗೂ ಹೋಗಿ 'ಹಾಜರಾದೆ' ಎಂದನು. ಮಿನಾಕ್ಕೆ ಕರೆ ಬಂತು, ಅಲ್ಲೂ 'ಹಾಜರಾದೆ' ಎಂದನು. ಎಲ್ಲ ಪರಿಶ್ರಮಗಳ ವೇಳೆಯೂ ಈ ಮಾತುಗಳನ್ನು ಅರ್ಥವರಿಯದೆ ಅವರ್ತಿಸುತ್ತ ಹೋದರೂ ವಿಧಿ ಕರ್ಮಗಳ ಪಾಲನೆ ಮಾಡಿದಂತಾಗುವುದು. ಆದರೆ ಇದು ಸಾಲದು, ಈ ತಲ್ಬಿಯಾದ ಮುಖ್ಯ ಜೀವಾಳವನ್ನು ಅರಿತುಕೊಳ್ಳಬೇಕು. ಸಕಲ ಲೋಕಗಳ ಪಾಲಕ ಪ್ರಭುವಿನ ಕಡೆಯಿಂದ ನನ್ನಂತಹ ಹುಲುಮಾನವನಿಗೆ ಕರೆ ಬಂದಿದೆ. ಆ ಪ್ರಕಾರ ನಾನು ಹಾಜರಿದ್ದೇನೆ ಎಂದು ತಿಳಿದುಕೊಂಡಾಗ ಪ್ರತಿಯೊಬ್ಬನ ತಲೆಗೆ ಆ ತಲ್ಬಿಯಾದ ಮತ್ತೇರಿ ಆತ ತನ್ಮಯತೆಯಿಂದ ಧಾವಿಸುವುದರಲ್ಲಿ ಸಂಶಯವಿಲ್ಲ.

## ಇಹ್ರಾಮಿಗೆ ಸಂಬಂಧಿಸಿದ ಕೆಲವು ಮುಖ್ಯ ನಿಯಮಗಳು:

ಯಾವ ಉದ್ದೇಶಕ್ಕಾಗಿ ಇಹ್ರಾಮ್ ಕಟ್ಟಲಾಗಿದೆಯೋ ಅದನ್ನು ನೆರವೇರಿಸದೆ ಇಹ್ರಾಮನ್ನು ಬಿಚ್ಚಬಾರದು. ಹಜ್ಜ್‌ಗಾಗಿ ಇಹ್ರಾಮ್ ಕಟ್ಟಲಾಗಿದ್ದು ಹಜ್ಜ್ ತಪ್ಪಿ ಹೋಯಿತೆಂದಾದರೆ ಉಮ್ರಾ ಮಾಡಿ ಹಲಾಲ್ ಆಗಬಹುದು. ಹಜ್ಜ್ ಮಾಡಲು ತಡೆಯುಂಟಾದಾಗ ಹರಮ್‌ನಲ್ಲೇ ಪ್ರಾಣಿ ಬಲಿ ಕೊಟ್ಟು ಹಲಾಲ್ ಆಗಬಹುದು.

ಸ್ತ್ರೀಯು ಋತುಸ್ರಾವ ಮತ್ತು ಬಾಣಂತಿತನದ ಕಾಲದಲ್ಲೂ ಇಹ್ರಾಮ್ ಕಟ್ಟಬಹುದು. ಇಹ್ರಾಮಿನ ಸ್ನಾನವು ಬಾಹ್ಯ ದೇಹ ಶುದ್ಧಿಗಾಗಿದೆ. ಅವರು ಸ್ನಾನ ಮತ್ತು ವುಝೂ ಮಾಡಿ ಕಿಬ್ಲಾಭಿಮುಖವಾಗಿ ಕುಳಿತು, ನಿಯ್ಯತ್ ಮಾಡಿ, ತಲ್ಬಿಯಾ ಪಠಿಸಬೇಕು. ಇಂತಹವರು ನಮಾಝ್, ತವಾಫ್ ಮತ್ತು ಸಈಗಳನ್ನು ಮಾಡಬಾರದು.

ಸ್ತ್ರೀಯರು ಇಹ್ರಾಮ್‌ನಲ್ಲಿ ಹೊಲಿದ ಬಟ್ಟೆಗಳನ್ನು ಧರಿಸಬಹುದು. ಆದರೆ ಮುಖಕ್ಕೆ ಬಟ್ಟೆ ಇತ್ಯಾದಿ ತಾಗದಂತೆ ಜಾಗ್ರತೆ ವಹಿಸಬೇಕು.

ತಲ್ಬಿಯಾವನ್ನು ಬಾಯಿಯಿಂದ ಉಚ್ಚರಿಸಲೇಬೇಕು. ಇದು ಅದರ ಶರತ್ತು. ಮನಸ್ಸಿನಲ್ಲಿ ಹೇಳಿ ಕೊಂಡರೆ ಸಾಲದು. ತಲ್ಬಿಯಾ ಅರಬೀ ಭಾಷೆಯಲ್ಲೇ ಉತ್ತಮ. ಇತರ

ಭಾಷೆಗಳಲ್ಲೂ ಹೇಳಬಹುದು. ತಲ್ಬಿಯಾವನ್ನು ಕಡಿತಗೊಳಿಸುವುದು ಮಕ್ರೂಹ್ ಆಗಿದೆ. ತಲ್ಬಿಯಾ ಹೇಳುವಾಗ ಬೇರೆ ಮಾತುಗಳನ್ನಾಡಬಾರದು. ಆಗ ಬೇರೆಯವರು ಸಲಾಮ್ ಕೂಡ ಮಾಡಬಾರದು.

## ಇಹ್ರಾಮ್‌ನ ನಿಷೇಧಗಳು

1. ಸಂಸರ್ಗ ಹಾಗೂ ಅದರ ಪ್ರೇರಕ ಮತ್ತು ಪೂರಕ ಕಾರ್ಯಗಳು.
2. ಸಾಮಾನ್ಯ ಪಾಪ ಕಾರ್ಯಗಳು, ಅಶ್ಲೀಲ ಕೃತ್ಯಗಳು ಮತ್ತು ದೇವಾಜ್ಞೆಗಳ ಉಲ್ಲಂಘನೆ.
3. ಜಗಳ, ಹೊಡೆದಾಟ, ಬಯ್ದಾಟ.
4. ಪ್ರಾಣಿಗಳ ಬೇಟೆ. (ಜಲಚರಗಳ ಬೇಟೆಗೆ ಅಡ್ಡಿಯಿಲ್ಲ.)
5. ತಲೆ ಬೋಳಿಸುವುದು, ಕೂದಲು ಕತ್ತರಿಸುವುದು, ದೇಹದ ಯಾವುದೇ ಭಾಗದ ರೋಮ ಕೀಳುವುದು, ಉಗುರು ತೆಗೆಯುವುದು.
6. ವಿವಾಹ ಮಾಡುವುದು.
7. ವಿವಾಹ ಮಾಡಿಸುವುದು.
8. ವಿವಾಹ ಸಂಬಂಧದ ಮಾತುಕತೆ
9. ಸುಗಂಧ ದ್ರವ್ಯಗಳನ್ನು ಪೂಸುವುದು.
10. ಸಿಂಧೂರ, ಕುಂಕುಮ, ಕೇಸರಿ ಬಣ್ಣಗಳ ಬಟ್ಟೆ ಉಡುವುದು.
11. ಮುಹ್ರಿಮ್(ಇಹ್ರಾಮ್ ಕಟ್ಟಿದವನು) ಬೇಟೆಯಾಡಿದ ಅಥವಾ ಬೇಟೆಗೆ ಯಾವುದೇರೀತಿಯಲ್ಲಿ ಸಹಾಯ ಮಾಡಿ ಗಳಿಸಿದ ಆಹಾರವನ್ನು ತಿನ್ನುವುದು.
12. ಬೇಟೆಯಾಡಲ್ಪಡುವ ಪಕ್ಷಿಗಳ ಮೊಟ್ಟೆಗಳನ್ನು ತಿನ್ನುವುದು. ಇವೆಲ್ಲವೂ ಸ್ತ್ರೀ ಮತ್ತು ಪುರುಷರಿಗೆ ಸಮಾನವಾಗಿದೆ.

## ಪುರುಷರಿಗೆ ಮಾತ್ರ ಅನ್ವಯಿಸುವ ನಿಷೇಧಗಳು

1. ತಲೆಯನ್ನು ಮುಚ್ಚುವುದು.
2. ಸಂಪೂರ್ಣ ಮುಖವನ್ನು ಮುಚ್ಚುವುದು.
3. ಅಂಗಿ ಧರಿಸುವುದು.
4. ಇಜಾರು ಧರಿಸುವುದು.
5. ಮುಂಡಾಸು ಕಟ್ಟುವುದು.
6. ಟೊಪ್ಪಿ ಸಹಿತ ಜುಬ್ಬಾ ಧರಿಸುವುದು.
7. ಉಣ್ಣೆ, ಹತ್ತಿ ಅಥವಾ ಚರ್ಮದ ಕಾಲು ಚೀಲ ಧರಿಸುವುದು.

## ಸ್ತ್ರೀಯರಿಗೆ ಮಾತ್ರ ಅನ್ವಯಿಸುವ ನಿಷೇಧಗಳು

1. ಮುಖದ ಮೇಲೆ ಪರದೆ ಹಾಕುವುದು.
2. ಕೈಚೀಲ ಧರಿಸುವುದು.

ಆದರೆ ಪರಪುರುಷರ ಮುಂದೆ ಬಟ್ಟೆ ಅಥವಾ ಇತರ ವಸ್ತುವನ್ನು ಮುಖಕ್ಕೆ ತಾಗದಂತೆ ಮರೆಸಿಕೊಳ್ಳುವುದು ನಿಷಿದ್ಧವಲ್ಲ.

ನಿಷಿದ್ಧ ಕಾರ್ಯಗಳ ಪೈಕಿ ಯಾವುದನ್ನಾದರೂ ಮಾಡಿಬಿಟ್ಟರೆ ಒಂದು ದಮ್ (ಪ್ರಾಣಿಬಲಿ) ಕೊಡಬೇಕಾಗುವುದು.

## ಇಹ್ರಾಮಿನಲ್ಲಿರುವಾಗ ನಿಷಿದ್ಧವಲ್ಲದ ವಿಷಯಗಳು

ತಣಿಸಿಕೊಳ್ಳಲು ಅಥವಾ ಬಿಸಿ ಮಾಡಿಕೊಳ್ಳಲು (ಮೈಯ ಕೊಳೆ ತೆಗೆಯಲಿಕ್ಕಾಗಿ ಅಲ್ಲ) ಧೂಳು ತೆಗೆಯಲು ತಣ್ಣೀರ ಸ್ನಾನ, ಬಿಸಿನೀರ ಸ್ನಾನ, ನೀರಲ್ಲಿ ಮುಳುಗುವುದು, ತುರಿಸ ಬೇಕಾದಲ್ಲಿ ತುರಿಸುವುದು, ಬಟ್ಟೆ ಒಗೆಯುವುದು, ಉಂಗುರ ಹಾಕಿಕೊಳ್ಳುವುದು, ಆಯುಧ ಗಳನ್ನು ಹಿಡಿಯುವುದು, ಶತ್ರುವಿನೊಡನೆ ಹೋರಾಟ, ಮನೆ ಡೇರೆಯೊಳಗೆ ಪ್ರವೇಶ, ಕೊಡೆ ಹಿಡಿಯುವುದು, ನೆರಳಲ್ಲಿ ನಿಲ್ಲುವುದು, ಸೊಂಟದ ಪಟ್ಟಿ (ಬೆಲ್ಟ್) ಕಟ್ಟುವುದು, ಕನ್ನಡಿ ನೋಡುವುದು, ಹಲ್ಲುಗಳನ್ನು ಬ್ರಶ್‌ನಿಂದ ಉಜ್ಜುವುದು, ಹಲ್ಲು ಕೀಳುವುದು, ಮುರಿದ ಉಗುರನ್ನು ಕಿತ್ತೆಸೆಯುವುದು, ಸುಗಂಧರಹಿತ ಕಾಡಿಗೆ ಹಚ್ಚುವುದು, ಮುಂಜಿ ಮಾಡುವುದು, ಬೊಕ್ಕೆ ಒಡೆಯುವುದು, ಮುರಿದ ಅಂಗಭಾಗಕ್ಕೆ ಪಟ್ಟಿ ಕಟ್ಟುವುದು, ವಾಂತಿಬೇಧಿ, ಸಿಡುಬು ಮೊದಲಾದ ಮಹಾವ್ಯಾಧಿಗಳಿಂದ ರಕ್ಷಣೆಗಾಗಿ ದಾಕು ಅಥವಾ ಚುಚ್ಚುಮದ್ದು ಹಾಕಿಸುವುದು, ಲುಂಗಿಯಲ್ಲಿ ಹಣ ವಗೈರೆ ಇಟ್ಟುಕೊಳ್ಳಲು ಕಿಸೆ ಮಾಡಿಕೊಳ್ಳುವುದು ತಲೆ ಮತ್ತು ಮುಖದ ಹೊರತು ಪೂರ್ಣಶರೀರವನ್ನು ಮುಚ್ಚುವುದು, ಪಾತ್ರೆ, ಮಂಚ, ತರಕಾರಿ ಇತ್ಯಾದಿಗಳನ್ನು ತಲೆಯ ಮೇಲೆ ಹೊರುವುದು, ದನ, ಆಡು ಇತ್ಯಾದಿ ಸಾಕು ಪ್ರಾಣಿಗಳನ್ನು ಮತ್ತು ಕೋಳಿ, ಬಾತುಗಳನ್ನು ದಿಬ್‌ಹ್ ಮಾಡಿ ಅವುಗಳ ಮಾಂಸ ತಿನ್ನುವುದು, ಇಹ್ರಾಮಿನಲ್ಲಿಲ್ಲದವನು ಹರಮಿನ ಹೊರಗೆ ಮುಹ್ರಿಮನ ಸಹಾಯ, ಅಪ್ಪಣೆ ಅಥವಾ ಸೂಚನೆಯಿಲ್ಲದೆ ಬೇಟೆಯಾಡಿದ ಹಾಗೂ ದಿಬ್‌ಹ್ ಮಾಡಿದ ಪ್ರಾಣಿಯ ಮಾಂಸ ತಿನ್ನುವುದು, ಏಲಕ್ಕಿ, ಲವಂಗ, ಸುವಾಸನಾ ತಂಬಾಕುಗಳಿಲ್ಲದ ತಾಂಬೂಲ ಹಾಕುವುದು, ಸರ್ಪ, ಚೇಳು, ವಿಷಜಂತು, ಚಿಕ್ಕಾಡು, ತಗಣೆ, ನೊಣ, ನುಸಿ, ಶವಭಕ್ಷಕ ಕಾಗೆ, ಗಿಡುಗ, ಕಣಜದ ಹುಳು, ಓತಿ, ಹಲ್ಲಿ ಮೊದಲಾದ ಹಾನಿಕಾರಕ ಜೀವಿಗಳನ್ನು ಕೊಲ್ಲುವುದು, ಕೈಕಾಲುಗಳು ಒಡೆದು ಹೋದಲ್ಲಿ ಗಾಯಕ್ಕೆ ಸುಗಂಧ ರಹಿತ ಎಣ್ಣೆ ಅಥವಾ ಮುಲಾಮು ಹಚ್ಚುವುದು, ಚೆನ್ನಾಗಿ ಬಿಗಿದು ಕಟ್ಟಿದ ಒಳ್ಳೆಯ ಗಂಟನ್ನು ತಲೆಯ ಮೇಲೆ ಹೊರುವುದು, ತುಪ್ಪ ಕೊಬ್ಬು ತೈಲಗಳ ಸೇವನೆ- ಇವೆಲ್ಲವನ್ನೂ ಇಹ್ರಾಮ್‌ನ ಅವಸ್ಥೆಯಲ್ಲಿ ಮಾಡಬಹುದಾಗಿದೆ.

## ಇಹ್ರಾಮ್ ಮತ್ತು ಮದೀನಾ ಪ್ರಯಾಣ

ಆಫಾಕೀ ಮಕ್ಕಾ ಯಾತ್ರಿಕರು ಮದೀನಾವನ್ನು ಸಂದರ್ಶಿಸುವರಷ್ಟೆ. ಅವರು ಈ ಕೆಳಗಿನ ವಿಷಯಗಳನ್ನು ಗಮನಿಸಬೇಕು.

1. ನೇರವಾಗಿ ಮದೀನಾಕ್ಕೆ ಹೋದರೆ, ಅಲ್ಲಿಂದ ಮಕ್ಕಾಕ್ಕೆ ಬರುವಾಗ ದುಲ್‌ಹುಲೈಫಾದಿಂದ ಇಹ್ರಾಮ್ ಕಟ್ಟಬೇಕು. ಕಿರಾನ್‌ನ ಇಹ್ರಾಮ್‌ನೊಂದಿಗೆ ಉಮ್ರಾ ಮಾಡಿ ಮದೀನಾಕ್ಕೆ ಹೋಗುವುದು ಮಕ್ರೂಹ್ ಆಗಿದೆ.
2. ಹಜ್ಜ್ ಮುಗಿಸಿ ಮದೀನಾಕ್ಕೆ ಹೋಗಿ ಅಲ್ಲಿಂದ ಸ್ವದೇಶಕ್ಕೆ ಮರಳಲು ಸೀದಾ ಜಿದ್ದಾಕ್ಕೆ ಹೋಗುವುದಾದರೆ ಇಹ್ರಾಮ್ ಬೇಡ. ಉಮ್ರಾ ಮಾಡಲಿಕ್ಕಾಗಿ ಮಕ್ಕಾಕ್ಕೆ ಹೋಗಬೇಕಿದ್ದರೆ ದುಲ್ ಹುಲೈಫಾದಿಂದ ಉಮ್ರಾ ಮಾಡಲು ಇಹ್ರಾಮ್ ಕಟ್ಟಬೇಕು.

# ಉಮ್ರಾ ಮಾಡುವ ಕ್ರಮ

## ಹರಮ್‌ನೊಳಗೆ ಪ್ರವೇಶ

ಇಹ್ರಾಮ್ ಸಮವಸ್ತ್ರ ಧರಿಸಿ, ಉಮ್ರಾದ ಸಂಕಲ್ಪ ಮಾಡಿ, ಮಿೂಕಾತಿನಿಂದ ತಲ್ಬಿಯಾ ಹೇಳುತ್ತಾ ದೇವವ್ಯಾಮೋಹ ಪರವಶರಾಗಿ ಮಕ್ಕಾದ ಕಡೆಗೆ ಬರುವ ತಮತ್ತುಅ್ ಅಥವಾ ಕಿರಾನ್ ಹಾಜಿಗಳು ಹರಮ್‌ನ ಗಡಿಗೆ ಬರುತ್ತಾರೆ. ಜಿದ್ದಾ ಮಾರ್ಗದಲ್ಲಿ ಈ ಗಡಿಯು ಮಕ್ಕಾದಿಂದ ಸುಮಾರು 15 ಕಿ.ಮಿೂ. ದೂರದಲ್ಲಿದೆ. ಅಲ್ಲಿ ಹರಮ್ ಗಡಿಯನ್ನು ಗುರುತಿಸ ಲಾಗಿದೆ. ಅದರ ಸಮಿೂಪವೇ ಒಂದು ಸಣ್ಣ ಮಸೀದಿ ಇದೆ. ಹುದೈಬಿಯಾ ಸಂಧಿ ಇಲ್ಲೇ ನಡೆದಿತ್ತು. ವಾಹನ ಚಾಲಕನು ಒಪ್ಪಿದರೆ, ಅಲ್ಲಿ ಇಳಿದು ಸ್ನಾನ, ವುಝೂ ಮುಗಿಸಿ ಎರಡು ರಕಅತ್ ನಮಾಝ್ ಮಾಡಿ ದುಆ ಮತ್ತು ಇಸ್ತಿಗ್‌ಫಾರ್ ಮಾಡಿಕೊಳ್ಳುವುದು ಒಳ್ಳೆಯದು.

ಈಗ ಹಾಜಿಗಳು ಸರ್ವಲೋಕಪಾಲಕ ಪ್ರಭುವಿನ ಸನ್ನಿಧಿಯ ಗಡಿಯೊಳಗೆ ಪ್ರವೇಶಿಸುತ್ತಾರೆ. ಭಾವಪರವಶತೆಯ ಮಟ್ಟ ಏರುತ್ತ ಹೋಗುತ್ತದೆ. ಮಸ್ಜಿದುಲ್ ಹರಮ್‌ನ ಗೋಪುರಗಳು ದೂರದಿಂದಲೇ ಕಂಗೊಳಿಸುತ್ತವೆ. ತಲ್ಬಿಯಾ ಹೇಳುತ್ತ ಮುಂದೆ ಮಸ್ಜಿದುಲ್ ಹರಾಮ್‌ಗೆ ತಲುಪುತ್ತಾರೆ. ಆಹಾ! ಎಂತಹ ಸೌಭಾಗ್ಯವಿದು!

## ಮಸ್ಜಿದುಲ್ ಹರಾಮ್‌ನೊಳಗೆ ಪ್ರವೇಶ

ಮಸ್ಜಿದುಲ್ ಹರಾಮನ್ನು ಪ್ರವೇಶಿಸುವಾಗ ಮೊದಲು بِسْمِ اللهِ الرَّحْمَانِ الرَّحِيمِ ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್ ಅದರೊಂದಿಗೆ اَللّٰهُمَّ افْتَحْ لِي اَبْوَابَ رَحْمَتِكَ "ಅಲ್ಲಾಹುಮ್ಮಫ್ತಹ್ ಲೀ ಅಬ್‌ವಾಬ ರಹ್ಮತಿಕ."

(ಓ ಅಲ್ಲಾಹ್, ನನಗಾಗಿ ನಿನ್ನ ಅನುಗ್ರಹಗಳ ದ್ವಾರಗಳನ್ನು ತೆರೆ) ಎಂದು ದುಆ ಮಾಡಬೇಕು. ಇದು ಮಸೀದಿಗಳೊಳಗೆ ಪ್ರವೇಶಿಸುವ ಕ್ರಮವೇ ಹೊರತು ಇಲ್ಲಿ ಹೊಸತೇನೂ ಇಲ್ಲ. ಎನ್ನುತ್ತ ಒಳಗೆ ಬಲಗಾಲಿಡಬೇಕು.

ಇನ್ನು ಹೋಗಬೇಕಾದುದು ಕಅಬಾ ಭವನದ ಕಡೆಗೆ. ಸುತ್ತಲೂ ಬೃಹದಾಕಾರದ ಮಸ್ಜಿದುಲ್ ಹರಾಮ್ ಇದೆ. ಅದರ ನಡುವೆ ಅತಿ ವಿಶಾಲವಾದ ಪ್ರಾಂಗಣ ಇದೆ. ಅದರ ನಡುವಿನಲ್ಲಿ ರಾಜಠೀವಿಯಲ್ಲಿ ನಿಂತಿರುವ ಕಅಬಾ ಈಗ ಕಣ್ಣಿಗೆ ಬೀಳುತ್ತಿದೆ. ಇದೂ ದುಆ ಸ್ವೀಕೃತವಾಗುವ ಒಂದು ಸಂದರ್ಭವಾದುದರಿಂದ ರಬ್ಬನಾ ತಕಬ್ಬಲ್ ಮಿನ್ನಾ...

"ಓ ಅಲ್ಲಾಹ್ ನಮ್ಮ ಪ್ರಾರ್ಥನೆಗಳೆಲ್ಲವೂ ಈಡೇರುವಂತಾಗಲಿ" ಎಂದು ಪ್ರಾರ್ಥಿಸುವುದು ಲೇಸು.

## ಕಅಬಾದ ತವಾಫ್

ಕಅಬಾದ ಸುತ್ತಲೂ ಯಾತ್ರಿಕರು ತವಾಫ್ ಮಾಡುವಾಗ ಹರಿಯುತ್ತಿರುವ ಜನ ಪ್ರವಾಹದಂತೆ ತೋರುತ್ತದೆ. ಈಗ ಯಾತ್ರಿಕರು ತವಾಫ್ ಆರಂಭಿಸುವ ಸ್ಥಳದಲ್ಲಿ ಅರ್ಥಾತ್ ಹಜರುಲ್ ಅಸ್ವದ್‌ಗೆ ನೇರಾಗಿ ನಿಂತು ತಲ್ಬಿಯಾ ಹೇಳುವುದನ್ನು ನಿಲ್ಲಿಸಿ ಬಿಡುತ್ತಾರೆ.

ತವಾಫ್ ಎಂದರೆ ಸುತ್ತು ಬರುವುದು(ಪ್ರದಕ್ಷಿಣೆ) ಅಥವಾ ಮಾನವನು ಯಾರನ್ನು ತನ್ನ ಸ್ವಾಮಿ, ಅನ್ನದಾತ, ಆರಾಧ್ಯನೆಂದು ತಿಳಿಯುತ್ತಾನೋ ಅವನ ಮುಂದೆ ತನ್ನನ್ನು ಪೂರ್ಣವಾಗಿ ಅರ್ಪಿಸಿ ಬಿಡುವ, ಅವನಿಗೆ ಸುತ್ತು ಬರುವ ಹಾಗೂ ಅವನ ಮುಂದೆ ಬಲಿದಾನಗಳನ್ನರ್ಪಿಸುವ ಸಹಜವಾದ ಭಾವೋದ್ವೇಗದ ಪ್ರದರ್ಶನವಿದು. ಅಲ್ಲಾಹನು ಸ್ವಯಂ ಪ್ರತ್ಯಕ್ಷನಾಗುವುದೆಂದರೆ ಅವನ ಮಹಿಮೆಗೆ ತಕ್ಕುದಲ್ಲ. ಅವನನ್ನು ಪ್ರತ್ಯಕ್ಷವಾಗಿ ಕಂಡು ಅವನಿಗೆ ಪ್ರದಕ್ಷಿಣೆ ಬಂದು ನಮ್ಮ ಭಾವೋದ್ವೇಗವನ್ನು ಶಮನಿಸಿಕೊಳ್ಳಬಹುದಾದ ಪ್ರಸಂಗವೂ ಅಲ್ಲ. ಆದುದರಿಂದ ಸಹಜವಾದ ಈ ಭಾವೋದ್ವೇಗದ ಶಮನಕ್ಕಾಗಿ ಅಲ್ಲಾಹನು ಕಅಬಾವನ್ನು ತನ್ನ 'ಗೃಹ' ಎಂದು ಕರೆದು 'ನನ್ನ ಅನುರಾಗಿಗಳು ಈ ಭವನಕ್ಕೆ ಪ್ರದಕ್ಷಿಣೆ ಬರುವ ಮೂಲಕ ತಮ್ಮ ಭಾವೋದ್ವೇಗವನ್ನು ಶಮನಗೊಳಿಸಿಕೊಳ್ಳಲಿ' ಎಂದು ಅಪ್ಪಣೆಕೊಟ್ಟನು. ಈ ಕಾರಣದಿಂದ ಆ ಭವನವನ್ನು ಅಲ್ಲಾಹನ ಮೇಲಿನ ಅತಿಮೋಹದಿಂದ ಅನುರಕ್ತರಾಗಿ ಭಾವಾವೇಶದಿಂದ ತವಾಫ್ ಮಾಡಬೇಕು. ಒಬ್ಬ ಪ್ರೇಮಿಯು ತನ್ನ ನೈಜ ಪ್ರೇಯಸಿಗೆ ಸರ್ವಸ್ವವನ್ನೂ ಅರ್ಪಿಸುವುದಕ್ಕಿಂತ ಮಿಗಿಲಾದ ಅನುರಕ್ತಭಾವದಿಂದ ಕಅಬಾದ ತವಾಫ್ ಮಾಡಬೇಕು.

ತವಾಫ್ ಎಂದರೆ ಕಅಬಾ ಭವನಕ್ಕೆ ಅದರ ಹೊರಭಾಗದಿಂದ ಬರುವ ಏಳು ಶೌತ್(ಸುತ್ತು)ಗಳು. ಮೊದಲು ತವಾಫ್‌ನ ನಿಯ್ಯತ್ ಮಾಡಿ ಹಜರುಲ್ ಅಸ್ವದ್‌ನ ಬಳಿಗೆ ಹೋಗಿ ಅದಕ್ಕೆ ಇಸ್ತಿಲಾಮ್ ಮಾಡಬೇಕು. ಅರ್ಥಾತ್ ಸಾಧ್ಯವಾದರೆ ಹಜರುಲ್ ಅಸ್ವದನ್ನು ಚುಂಬಿಸಬೇಕು. ಜನರ ಸಮೂಹದಿಂದಾಗಿ ಚುಂಬನ ಅಸಾಧ್ಯವಾದರೆ ಕೈಯಿಂದ ಅಥವಾ ಛಡಿಯಿಂದ ಹಜರುಲ್ ಅಸ್ವದನ್ನು ಮುಟ್ಟಿ ಅದನ್ನು ಚುಂಬಿಸಬೇಕು.

ಇದೂ ಅಸಾಧ್ಯವೆಂದು ಕಂಡರೆ ನೂಕು ನುಗ್ಗಲಿಗೆ ಹೋಗದೆ, ದೂರದಲ್ಲೇ ಅದರತ್ತ ತಿರುಗಿ ಎರಡೂ ಕೈಗಳನ್ನು ನಮಾಝ್‌ನಲ್ಲಿ ಎತ್ತುವಂತೆ ಎತ್ತಿ ತೋರಿಸಬೇಕು. ಈ ಕೈಗಳನ್ನು ಚುಂಬಿಸಬೇಕಾಗಿಲ್ಲ. ಈ ಮೂರು ರೂಪವನ್ನು ಇಸ್ತಿಲಾಮ್ ಎನ್ನುತ್ತಾರೆ.

ಇಸ್ತಿಲಾಮ್ ಮಾಡುವಾಗ

بِسْمِ اللهِ اَللهُ اَكْبَرْ "ಬಿಸ್ಮಿಲ್ಲಾಹಿ ಅಲ್ಲಾಹು ಅಕ್ಬರ್" ಎಂದು ಹೇಳಬೇಕು.

ತರುವಾಯ ದುಆ ಮಾಡಿ ಕಅಬಾ ತನ್ನ ಎಡಬದಿಯಲ್ಲಿರುವಂತೆ ಅದರ ಸುತ್ತಲೂ ನಡೆಯಲಾರಂಭಿಸಬೇಕು. ಹೀಗೆ ನಡೆಯುವಾಗ ಕಅಬಾಕ್ಕೆ ಮುಖ ಮಾಡಬಾರದು. ಇದು ಮಕ್ಕಾಕ್ಕೆ ಬಂದಾಗಿನ ಪ್ರಥಮ ತವಾಫ್ ಆಗಿದ್ದರೆ ತವಾಫ್ ಕುದೂಮ್‌ನ ಪ್ರಥಮ ಮೂರು ಸುತ್ತುಗಳಲ್ಲಿ ರಮಲ್ ಮತ್ತು ಇಝ್ತಿಬಾಅ್ ಮಾಡಬೇಕು. ಅನಂತರದ ನಾಲ್ಕು ಸುತ್ತುಗಳಲ್ಲಿ ರಮಲ್‌ನ ಅಗತ್ಯವಿಲ್ಲ. ರಮಲ್ ಎಂದರೆ ಸಣ್ಣ ಸಣ್ಣ ಹೆಜ್ಜೆಗಳನ್ನಿಡುತ್ತ ಸೆಟೆಯುತ್ತ ಭುಜಗಳನ್ನು ಅಲುಗಾಡಿಸುತ್ತ ಜಟ್ಟಿಗಳಂತೆ ಠೀವಿಯಿಂದ ನಡೆಯುವ ನಡಿಗೆ. ಇಝ್ತಿಬಾಅ್ ಎಂದರೆ ಇಹ್ರಾಮಿನ ಹೊದೆಯುವ ಬಟ್ಟೆಯ ಮಧ್ಯಭಾಗವನ್ನು ಬಲಕಂಕುಳಿನ ಅಡಿಗೆ ಇಟ್ಟು ಅದರ ಒಂದು ಸೆರಗನ್ನು ಎಡ ಹೆಗಲ ಮೇಲೆ ಹಾಕಿಕೊಳ್ಳುವುದು. ತವಾಫ್ ಕುದೂಮ್‌ನ ಎಲ್ಲಾ ಸುತ್ತುಗಳಲ್ಲೂ ಇಝ್ತಿಬಾಅ್ ಇರಬೇಕು.

ಕೆಲವರು ತವಾಫ್‌ನಲ್ಲಿ ಓದಲಿಕ್ಕಾಗಿ ಅನೇಕ ಉದ್ದುದ್ದ ದುಆಗಳನ್ನು ತಯಾರಿಸಿದ್ದಾರೆ. ಅವು ಶರೀಅತ್‌ನಲ್ಲಿಲ್ಲ. ಅವುಗಳನ್ನು ಕಂಠಪಾಠ ಮಾಡುವ ಅಥವಾ ಓದುವ ಅಗತ್ಯವೇನೂ ಇಲ್ಲ. ಒಬ್ಬ ಮುಅಲ್ಲಿಮ್ ಆ ದುಆಗಳನ್ನು ಪಠಿಸುತ್ತಾ ಸಾಗುತ್ತಿರುವಾಗ ಯಾತ್ರಿಕರ ತಂಡವು ಅದನ್ನು ತಪ್ಪು ತಪ್ಪಾಗಿ ಓದುತ್ತ ಹಿಂಬಾಲಿಸಿ ಹೋಗುವ ಕ್ರಮ ವ್ಯರ್ಥ. ತವಾಫ್ ಮಾಡುವಾಗ ಅಲ್ಲಾಹನ ದಿಕ್ರ್ ಮಾಡುತ್ತಾ ಅವನನ್ನು ಪ್ರಾರ್ಥಿಸುತ್ತಾ ಹೋದರೆ ಸಾಕು.

سُبْحَانَ اللهِ اَلْحَمْدُ لِلّٰهِ لاَ اِلٰهَ اِلاَّ اللهُ اَللهُ اَكْبَرُ

'ಸುಬ್‌ಹಾನಲ್ಲಾಹ್', 'ಅಲ್‌ಹಮ್ದುಲಿಲ್ಲಾಹ್', 'ಲಾಇಲಾಹ ಇಲ್ಲಲ್ಲಾಹ್' 'ಅಲ್ಲಾಹು ಅಕ್ಬರ್' ಎಂಬ ದಿಕ್ರ್‌ಗಳು ಧಾರಾಳ ಸಾಕು. ದುಆ ಹೃದಯಾಂತರಾಳದಿಂದ ಹೊರಡಬೇಕು. ದುಆ ಯಾವ ಭಾಷೆಯಲ್ಲೂ ಮಾಡಬಹುದು. ನಿರಂತರ ಮಾಡಬೇಕು.

ಹಜರುಲ್ ಅಸ್ವದ್ ಕಅಬಾ ಭವನದ ಪೂರ್ವ ದಿಕ್ಕಿನ ಮೂಲೆಯಲ್ಲಿದೆ. ಅಲ್ಲಿಂದ ಹೊರಟು ಸುತ್ತು ಬರುವಾಗ ಸಿಗುವ ಕಅಬಾದ 2ನೆಯ ಮೂಲೆಗೆ 'ರುಕ್ನ್ ಇರಾಕೀ' 3ನೆಯ ಮೂಲೆಗೆ 'ರುಕ್ನ್ ಶಾಮೀ' ಮತ್ತು 4ನೆಯ ಮೂಲೆಗೆ 'ರುಕ್ನ್ ಯಮಾನೀ' ಎಂಬ ಹೆಸರಿವೆ. ಸುತ್ತುವರಿಯುತ್ತ ರುಕ್ನ್ ಯಮಾನೀಗೆ ಬಂದು ಅದರ ಮೇಲೆ ಕೈಯಾಡಿಸುತ್ತ ಮುಂದುವರಿಯಬೇಕು. ಅದು ಸಾಧ್ಯವಾಗದಿದ್ದರೆ ಚಿಂತಿಲ್ಲ. ರುಕ್ನ್ ಯಮಾನೀ ಮತ್ತು ಹಜರುಲ್ ಅಸ್ವದ್‌ಗಳ ನಡುವಿನಲ್ಲಿ ಹೀಗೆ ದುಆ ಮಾಡಬೇಕೆಂದು ಪ್ರವಾದಿವರ್ಯರು(ಸ) ಕಲಿಸಿದ್ದಾರೆ.

رَبَّنَا آتِنَا فِي الدُّنْيَا حَسَنَةً وَفِي الْآخِرَةِ حَسَنَةً وَقِنَا عَذَابَ النَّارِ

وَاَدْخِلْنَا الْجَنَّةَ مَعَ الْاَبْرَارْ يَا عَزِيزُ يَا غَفَّارُ يَا رَبَّ الْعَالَمِينْ

"ರಬ್ಬನಾ ಆತಿನಾ ಫಿದ್ದುನ್ಯಾ ಹಸನತಂವ್ವಫಿಲ್ ಆಖಿರತಿ ಹಸನತಂವಕಿನಾ ಅದಾಬನ್ನಾರ್. ವಅದ್‌ಖಿಲ್‌ನಲ್ ಜನ್ನತ ಮಅಲ್‌ಅಬ್‌ರಾರ್. ಯಾ ಅಝೀಝು ಯಾ ಗಫ್ಫಾರ್, ಯಾ ರಬ್ಬಲ್ ಆಲಮೀನ್."

ಓ ನಮ್ಮ ಪ್ರಭೂ! ನಮಗೆ ಈ ಲೋಕದಲ್ಲೂ ಒಳಿತನ್ನು ದಯಪಾಲಿಸು, ಪರಲೋಕದಲ್ಲೂ ಒಳಿತನ್ನು ದಯಪಾಲಿಸು ಮತ್ತು ನಮ್ಮನ್ನು ನರಕ ಶಿಕ್ಷೆಯಿಂದ ರಕ್ಷಿಸು. ನಮ್ಮನ್ನು ಸಜ್ಜನರೊಂದಿಗೆ ಸ್ವರ್ಗದಲ್ಲಿ ಪ್ರವೇಶಗೊಳಿಸು. ಓ ಪ್ರಬಲನೇ, ಓ ಕ್ಷಮಾದಾನಿಯೇ, ಸರ್ವಲೋಕಗಳ ಪಾಲಕ ಪ್ರಭುವೇ.

ಈಗ ಪುನಃ ಹಜರುಲ್ ಅಸ್ವದ್‌ನ ಮುಂದೆ ತಲುಪಿದಾಗ ಸಾಧ್ಯವಾಗುವ ರೀತಿಯಲ್ಲಿ ಪುನಃ ಇಸ್ತಿಲಾಮ್ ಮಾಡಿ 2ನೆಯ ಸುತ್ತನ್ನು ಆರಂಭಿಸಬೇಕು. ಹೀಗೆ 7 ಬಾರಿ ಪ್ರದಕ್ಷಿಣೆ ಮಾಡಬೇಕು. 7ನೆಯ ಸುತ್ತು ಸಂಪೂರ್ಣಗೊಂಡು ಇಸ್ತಿಲಾಮ್ ಮಾಡಿದಾಗ 7 ಪ್ರದಕ್ಷಿಣೆಗಳೂ 8 ಇಸ್ತಿಲಾಮ್‌ಗಳೂ ಒಳಗೊಂಡಂತೆ ಒಂದು ತವಾಫ್ ಪೂರ್ಣಗೊಳ್ಳುತ್ತದೆ.

## ಮಕಾಮು ಇಬ್‌ರಾಹೀಮ್‌ನ ಬಳಿ ನಮಾಝ್

ಉಮ್ರಾದ ತವಾಫ್ ಮುಗಿದ ಬಳಿಕ ಮುಕಾಮು ಇಬ್‌ರಾಹೀಮ್‌ನ ಹಿಂದೆ ನಿಂತು 2 ರಕಅತ್ 'ತವಾಫ್‌ನ ನಫಿಲ್ ನಮಾಝ್' ಮಾಡಬೇಕು. ಪ್ರಥಮ ರಕಅತ್‌ನಲ್ಲಿ ಸೂರಃ ಕಾಫಿರೂನ್ ಮತ್ತು 2ನೆಯ ರಕಅತ್‌ನಲ್ಲಿ ಸೂರಃ ಇಖ್‌ಲಾಸ್ ಓದುವುದು ಸುನ್ನತ್ ಆಗಿದೆ. ಮಕಾಮು ಇಬ್‌ರಾಹೀಮ್‌ನ ಬಳಿ ಜನಸಂದಣಿ ಇದ್ದರೆ ಈ ನಮಾಝನ್ನು ಅದರ ಪರಿಸರದಲ್ಲಿ ಎಲ್ಲೂ ಮಾಡಬಹುದು. ಅನಂತರ ತನ್ನ, ತನ್ನವರ ಮತ್ತು ಸಕಲ ಜನರ ಇಹಪರಗಳ ಎಲ್ಲ ಇಷ್ಟಾರ್ಥ ಸಿದ್ಧಿಗಾಗಿ ಹಾರ್ದಿಕವಾಗಿ ದುಆ ಮಾಡಬೇಕು.

ಮಕಾಮು ಇಬ್‌ರಾಹೀಮ್ ಎಂಬುದು ಪ್ರವಾದಿ ಇಬ್‌ರಾಹೀಮ್‌ರ(ಅ) ಒಂದು ಸ್ಮಾರಕ. ಅವರು ಈ ಕಲ್ಲಿನ ಮೇಲೆಯೇ ನಿಂತು ಕಅಬಾದ ಗೋಡೆಗಳನ್ನು ಕಟ್ಟಿದ್ದರು. ಆ ನಿರ್ಜನ ಪ್ರದೇಶದಲ್ಲಿ ಅವರು ಆ ಕಲ್ಲಿನ ಮೇಲೆ ನಿಂತು ಅಲ್ಲಾಹನ ಆದೇಶದ ಪ್ರಕಾರ ಸಕಲ ಮಾನವ ಕೋಟಿಗೆ ಹಜ್ಜ್ ಯಾತ್ರೆಯ ಕರೆಕೊಟ್ಟಿದ್ದರು. ಆ ಕರೆಗೆ ಓಗೊಟ್ಟೇ ಇಂದು ನಾವು ಲಬ್ಬೈಕ್ (ಹಾಜರಾದೆ, ಹಾಜರಾದೆ) ಎನ್ನುತ್ತ ಅಲ್ಲಿಗೆ ಹೋಗುತ್ತಿದ್ದೇವೆ. ಹಿಂದೆ ಆ ಕಲ್ಲು ಕಅಬಾದ ಬದಿಯಲ್ಲೇ ಇರಿಸಲ್ಪಟ್ಟಿತ್ತು. ಅನಂತರ ಅದನ್ನು ಈಗಿರುವ ಸ್ಥಾನದಲ್ಲಿ ಒಂದು ಗಾಜಿನ ಗೂಡಿನೊಳಗೆ ಇರಿಸಲಾಯಿತು. 'ಇದನ್ನು ನಮಾಝ್‌ನ ಸ್ಥಾನವನ್ನಾಗಿ ಮಾಡಿಕೊಳ್ಳಿರಿ' ಎಂಬ ಅಲ್ಲಾಹನ ಆದೇಶದ ಪ್ರಕಾರವೇ ಆ ಜಾಗದಲ್ಲಿ ಎರಡು ರಕಅತ್ ನಮಾಝ್ ಮಾಡಲಾಗುತ್ತದೆ.

## ಮುಲ್ತಝಿಮ್‌ನಲ್ಲಿ ದುಆ

ಈ ನಮಾಝ್ ಮತ್ತು ದುಆದ ಬಳಿಕ ಮುಲ್ತಝಿಮ್‌ಗೆ ಹೋಗಬೇಕು. ಹಜರುಲ್ ಅಸ್ವದ್ ಮತ್ತು ಕಅಬಾದ ಬಾಗಿಲುಗಳ ನಡುವಿನ ಭಾಗವೇ ಮುಲ್ತಝಿಮ್. ಮುಲ್ತಝಿಮನ್ನು

ಅಪ್ಪಿಹಿಡಿದು ಗಲ್ಲಗಳನ್ನು ತಾಗಿಸುತ್ತ ಹೃದಯಾಂತರಾಳದಿಂದ ದುಆ ಮಾಡಬೇಕು. ಅಲ್ಲಿ ಬೇಕಾದುದೆಲ್ಲವನ್ನೂ ಬೇಡಬೇಕು. ಆಗ ಇಹ್ರಾಮಿನಲ್ಲಿದ್ದರೆ ಕಲಬಾದ ಹೊದಿಕೆಯು ತಲೆಯನ್ನು ಒರೆಸದಂತೆ ಜಾಗ್ರತೆ ವಹಿಸಬೇಕು. ಜನಸಂದಣಿಯಿಂದಾಗಿ ಮುಲ್ತಝಿಮನ್ನು ಸಮೀಪಿಸಲು ಅಸಾಧ್ಯವಾದರೆ ನೂಕು ನುಗ್ಗಲಿನ ಗೊಡವೆಗೆ ಹೋಗದೆ ದೂರ ನಿಂತು ದುಆ ಮಾಡಿದರೆ ಸಾಕು.

## ಝಮ್ ಝಮ್ ನೀರು

ಮುಲ್ತಝಿಮ್‌ನಿಂದ ಝಮ್ ಝಮ್ ನೀರಿರುವ ಜಾಗಕ್ಕೆ ಹೋಗಬೇಕು. ಝಮ್ ಝಮ್ ನೀರು ಹ. ಹಾಜಿರಾ ಮತ್ತು ಹ. ಇಸ್ಮಾಈಲ್‌ರ(ಅ) ಸ್ಮಾರಕವಾಗಿದ್ದು ಅದು ಅಂದಿನಿಂದಲೂ ಹರಿಯುತ್ತಾ ಇದೆ. ಪ್ರವಾದಿವರ್ಯರು(ಸ) ತವಾಫ್‌ನ ಬಳಿಕ ಝಮ್ ಝಮ್‌ನ ಬಳಿಗೆ ಬಂದು ಅದರ ನೀರು ಕುಡಿದಿದ್ದರು ಮತ್ತು ತಲೆಗೆ ಹೊಯ್ದುಕೊಂಡಿದ್ದರು. ಝಮ್ ಝಮ್ ನೀರು ಬರ್ಕತಿಗಾಗಿ ಮಾತ್ರವಲ್ಲ ಅದನ್ನು ಆಹಾರ ಮತ್ತು ಚಿಕಿತ್ಸೆಯ ರೂಪದಲ್ಲೂ ಕುಡಿಯಲಾಗುತ್ತದೆ. ಅದನ್ನು ಯಾವ ಉದ್ದೇಶಕ್ಕಾಗಿ ಕುಡಿಯಲಾಗುವುದೋ ಅದು ನೆರವೇರುವುದೆಂದು ಹ. ಜಾಬಿರ್‌ರು(ರ) ವರದಿ ಮಾಡಿದ್ದಾರೆ. ಝಮ್ ಝಮ್ ನೀರು ಜಗತ್ತಿನ ಅತ್ಯಂತ ಪವಿತ್ರ, ಅಮೂಲ್ಯ ಮತ್ತು ಪ್ರಯೋಜನಕಾರಿ ನೀರಾಗಿದೆ. ಇದು ಶಕ್ತಿವರ್ಧಕ ಕಾಯಕಲ್ಪವೂ ಆಗಿದೆ. ಹ. ಅಬೂದರ್ ಗಿಫ್ಫಾರೀ(ರ) ಅವರು ಒಂದು ತಿಂಗಳ ಕಾಲ ಝಮ್ ಝಮ್ ನೀರು ಮಾತ್ರ ಕುಡಿದು ಜೀವಿಸಿದ್ದರು.

(ಮುಸ್ಲಿಮ್)

ಝಮ್ ಝಮ್ ನೀರು ಕುಡಿಯುವಾಗ ಕಿಬ್ಲಾಭಿಮುಖವಾಗಿ ಬಿಸ್ಮಿಲ್ಲಾಹ್ ಹೇಳುತ್ತ ನಿಂತು ಅಥವಾ ಕುಳಿತು ಮೂರು ಶ್ವಾಸಗಳಲ್ಲಿ ಕುಡಿಯಬೇಕು. ಕುಡಿಯುವಾಗ-

اَللّٰهُمَّ اِنِّي اَسْأَلُكَ عِلْمًا نَافِعًا وَرِزْقًا وَاسِعًا وَشِفَاءً مِنْ كُلِّ دَاءٍ

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಇಲ್ಮನ್ ನಾಫಿಅನ್ ವ ರಿಝ್‌ಕಂವ್ವಾಸಿಅನ್‌ವ ಶಿಫಾಅಮ್ಮಿನ್ ಕುಲ್ಲಿ ದಾಅ್."

(ಓ ಅಲ್ಲಾಹ್! ನಾನು ನಿನ್ನಲ್ಲಿ ಲಾಭದಾಯಕ ಜ್ಞಾನವನ್ನೂ ವಿಸ್ತ್ರತ ಜೀವನಾಧಾರವನ್ನೂ ಸಕಲ ವ್ಯಾಧಿಗಳಿಂದ ಗುಣವನ್ನೂ ಬೇಡುತ್ತೇನೆ) ಎಂದು ದುಆ ಮಾಡಬೇಕು. ಝಮ್ ಝಮ್ ನೀರನ್ನು ಇಷ್ಟಮಿತ್ರರಿಗೆ ಕಾಣಿಕೆಯ ರೂಪದಲ್ಲಿ ಒಯ್ಯಬಹುದು.

ಅನೇಕ ಹಾಜಿಗಳು ಬರ್ಕತಿಗಾಗಿ ಕಫನಿನ ಬಟ್ಟೆಯನ್ನು ಝಮ್ ಝಮ್ ನೀರಿನಲ್ಲಿ ಅದ್ದಿ ಒಣಗಿಸುತ್ತಾರೆ. ಇಂತಹ ಕಫನನ್ನು ಮಯ್ಯತ್‌ಗೆ ತೊಡಿಸಿದರೆ ಅದಕ್ಕೆ ಮುಕ್ತಿ ಖಚಿತವೆಂದು ಭಾವಿಸುತ್ತಾರೆ. ಇದಕ್ಕೆ ಆಧಾರವೇನೂ ಇಲ್ಲ. ಇದು ಕೇವಲ ಮೂಢನಂಬಿಕೆ. ಸತ್ಕರ್ಮಗಳಿಲ್ಲದಿದ್ದರೆ ಈ ಕಫನ್ ಯಾವ ಕೆಲಸಕ್ಕೂ ಬಾರದು.

## ಸಫಾ ಮತ್ತು ಮರ್ವಾ ಬೆಟ್ಟಗಳ ನಡುವೆ ಸಈ

ಝಮ್ ಝಮ್ ಕುಡಿದಾದ ಬಳಿಕ "ಬಾಬುಸ್ಸಫಾ" ಅಥವಾ ಸಫಾ ಎಂಬ ದ್ವಾರದ ಮೂಲಕ ಸಫಾ ಬೆಟ್ಟದ ಕಡೆಗೆ ಹೋಗಬೇಕು. ಈಗ ಈ ಬೆಟ್ಟಗಳ ನಡುವಿನ ದಾರಿಯು ಕಲ್ಲುಮುಳ್ಳುಗಳ ದಾರಿಯಾಗಿರದೆ ಉದ್ದಕ್ಕೂ ಮಾಡು ಇದೆ. ನೆಲವು ಹಸನಾಗಿದೆ. ಹೋಗಲು ಒಂದು ದಾರಿ, ಬರಲು ಇನ್ನೊಂದು ದಾರಿ ಇದೆ. ನಡುವೆ ಉದ್ದಕ್ಕೂ ನಡೆಯಲಾಗದವರನ್ನು ಗಾಲಿಕುರ್ಚಿಯಲ್ಲಿ ಕುಳ್ಳಿರಿಸಿ ದೂಡಿಕೊಂಡು ಸಈ ಮಾಡಿಸುವ ಎರಡು ಪ್ರತ್ಯೇಕ ದಾರಿಗಳಿವೆ.

ಸಫಾ ಬೆಟ್ಟದ ಬಳಿಗೆ ತಲುಪುತ್ತಲೇ-

إِنَّ الصَّفَا وَالْمَرْوَةَ مِنْ شَعَائِرِ اللهِ

"ಇನ್ನಸ್ಸಫಾ ವಲ್ ಮರ್ವತ ಮಿನ್ ಶಆಇರಿಲ್ಲಾ."

(ಸಫಾ ಮತ್ತು ಮರ್ವಾಗಳು ಅಲ್ಲಾಹನ ಲಾಂಛನಗಳಾಗಿವೆ) ಎಂಬ ಸೂಕ್ತವನ್ನು ಪಠಿಸಿ,

أَبْدَأُ بِمَا بَدَأَ اللهُ بِهِ

'ಅಬ್‌ದಉ ಬಿಮಾ ಬದಅಲ್ಲಾಹು ಬಿಹೀ.'

(ಅಲ್ಲಾಹನು ಆರಂಭಿಸಿದಲ್ಲಿಂದಲೇ ನಾನೂ ಆರಂಭಿಸುತ್ತೇನೆ) ಎಂದು ಹೇಳಿ ದೂರದಲ್ಲಿ ಕಅಬಾ ಕಣ್ಣಿಗೆ ಕಾಣಿಸುವ ವರೆಗೂ ಅದರ ಮೇಲೇರಬೇಕು. ಕಿಬ್ಲಾಭಿಮುಖವಾಗಿ ನಿಂತು ಸಈ ಮಾಡುವ ಸಂಕಲ್ಪ ಮಾಡಿ ಎರಡೂ ಕೈಗಳನ್ನೆತ್ತಿ ತಕ್ಬೀರ್ ಹೇಳಿದ ನಂತರ ಹಾರ್ದಿಕವಾಗಿ ವಿನಯ ಮತ್ತು ಏಕಾಗ್ರತೆಯೊಂದಿಗೆ ದುಆ ಮಾಡಬೇಕು- ತರುವಾಯ ಅಲ್ಲಿಂದ ಮರ್ವಾ ಬೆಟ್ಟದ ಕಡೆಗೆ ಸಾಧಾರಣ ನಡಿಗೆಯೊಂದಿಗೆ ನಡೆಯಬೇಕು. مَيْلَيْنِ الْاَخْضَرَيْنِ "ಮೈಲೈನಿಲ್ ಅಖ್‌ದರೈನ್."(ಎರಡು ಹಸಿರು ಸ್ತಂಭ)ಗಳ ನಡುವೆ ವೇಗವನ್ನು ಹೆಚ್ಚಿಸಬೇಕು. ಹೀಗೆ ನಡೆಯುವಾಗ ಮಾಡಬೇಕಾದ ನಿಶ್ಚಿತ ದುಆಗಳೇನೂ ಇಲ್ಲ. ಎಲ್ಲಾ ಸಮಯಗಳಲ್ಲೂ "ಸುಬ್‌ಹಾನಲ್ಲಾಹ್", "ಅಲ್ ಹಮ್ದುಲಿಲ್ಲಾಹ್", "ಲಾ ಇಲಾಹ ಇಲ್ಲಲಾಹ್" ಮತ್ತು "ಅಲ್ಲಾಹು ಅಕ್ಬರ್" ಎಂಬ ನೆನಪಿರುವ ತಸ್ಬೀಹ್‌ಗಳನ್ನು ಮಾಡುತ್ತಿರಬೇಕು. ಮರ್ವಾ ಬೆಟ್ಟಕ್ಕೆ ತಲುಪಿ ಅಲ್ಲಿಯೂ ಕಅಬಾಕ್ಕೆ ಮುಖ ಮಾಡಿ ನಿಂತು, ಪವಿತ್ರ ಕುರ್‌ಆನಿನ ಸುಮಾರು 25 ಸೂಕ್ತಗಳನ್ನು ಪಠಿಸುವಷ್ಟು ಸಮಯ ನಿಂತು ದುಆ ಮಾಡಬೇಕು. ಅಲ್ಲಿಂದ ಇಳಿದು ಸಫಾ ಬೆಟ್ಟದ ಕಡೆಗೆ ನಡೆಯಬೇಕು. ಪ್ರತಿಸಲ ಹಸಿರು ಸ್ತಂಭಗಳ ನಡುವೆ ವೇಗವನ್ನು ಹೆಚ್ಚಿಸಬೇಕು. ಸಫಾ ಮತ್ತು ಮರ್ವಾ ಬೆಟ್ಟಗಳನ್ನು ಏರಿ ನಿಂತಾಗಲೆಲ್ಲ ಕೈಗಳನ್ನೆತ್ತಿ ದುಆ ಮಾಡಬೇಕು. 7ನೆಯ ನಡಿಗೆಯು ಮರ್ವಾಬೆಟ್ಟದಲ್ಲಿ ಕೊನೆಗೊಳ್ಳುತ್ತದೆ. ಇಲ್ಲಿಗೆ ಸಈ ಮುಗಿಯುತ್ತದೆ. ಅಲ್ಲಿ ದುಆ ಮಾಡಿ ತಲೆಕೂದಲನ್ನು ಕತ್ತರಿಸಬೇಕು. ಸ್ತ್ರೀಯರು ತಮ್ಮ ಕೂದಲಿನ ತುದಿಯಿಂದ ಸುಮಾರು ಒಂದಂಗುಲದಷ್ಟು

ಕತ್ತರಿಸಿ ಬಿಡಬೇಕು. ಇಲ್ಲಿಗೆ ಉಮ್ರಾ ಮುಗಿಯುತ್ತದೆ. ಈಗ ತಮತ್ತುಅ್ ಹಜ್ಜ್ ಮಾಡುವವರು ಹಲಾಲ್ ಆಗುವರು ಅರ್ಥಾತ್ ಇಹ್ರಾಮಿನ ನಿರ್ಬಂಧಗಳಿಂದ ಮುಕ್ತರಾಗುವರು. ಇನ್ನು ದುಲ್‌ಹಜ್ಜ್ 8ನೆಯ ದಿನಾಂಕದ ವರೆಗೂ ಅವರು ಬೇರೆ ಉಡುಪಿನಲ್ಲಿ ಇರಬಹುದು. ಆದರೆ ಕಿರಾನ್ ಹಜ್ಜ್ ಮಾಡುವ ಸಂಕಲ್ಪ ಮಾಡಿದವರು ಉಮ್ರಾದ ಸಈ ಮಾಡಿದ ನಂತರ ಕೂದಲನ್ನು ಕತ್ತರಿಸಬಾರದು. ಅವರು ಉಮ್ರಾದ ಬಳಿಕವೂ ಇಹ್ರಾಮಿನಲ್ಲೇ ಇರುವರು ಮತ್ತು ಇದೇ ಇಹ್ರಾಮಿನೊಂದಿಗೆ ಹಜ್ಜ್ ಯಾತ್ರೆಯ ವಿವಿಧ ಕರ್ಮಗಳನ್ನು ನೆರವೇರಿಸುವರು.

## ಝಮ್ ಝಮ್ ಮತ್ತು ಸಫಾ-ಮರ್ವಾಗಳ ಐತಿಹಾಸಿಕ ಹಿನ್ನೆಲೆ

ಈ ಸಂದರ್ಭದಲ್ಲಿ ಝಮ್ ಝಮ್ ನೀರು ಮತ್ತು ಸಫಾ-ಮರ್ವಾಗಳ ನಡುವಿನ ಓಡಾಟದ ಮಹತ್ವವನ್ನು ಸ್ಮರಿಸಿಕೊಳ್ಳಬೇಕು. ಇವುಗಳ ಪೈಕಿ ಪ್ರತಿಯೊಂದೂ ಇತಿಹಾಸ ಪ್ರಸಿದ್ಧವಾಗಿದ್ದು ಅದರಲ್ಲಿ ನಮಗೆ ಅತ್ಯುತ್ತಮ ಪಾಠವಿದೆ.

ಇಂದು ಕಅಬಾ, ಝಮ್‌ಝಮ್ ಬಾವಿ ಮತ್ತು ಮಕಾಮು ಇಬ್‌ರಾಹೀಮ್ ಇರುವಲ್ಲೇ ಹ. ಇಬ್‌ರಾಹೀಮ್‌ರವರು(ಅ) ತಮ್ಮ ಪ್ರೀತಿಯ ಪತ್ನಿ ಹಾಜಿರಾ(ಅ) ಮತ್ತು ಮೊಲೆಹಾಲು ಉಣ್ಣುವ ಹಸುಗೂಸು ಹ. ಇಸ್ಮಾಈಲ್‌ರನ್ನು(ಅ) ಒಂದು ಹೂಜಿ ನೀರು ಮತ್ತು ಒಂದು ಚೀಲದಲ್ಲಿ ಖರ್ಜೂರ ಕೊಟ್ಟು, ಅಲ್ಲಿ ಬಿಟ್ಟು ಹೋಗಿದ್ದರು. ಆಗ ಅದೊಂದು ನಿರ್ಜನ ಪ್ರದೇಶವಾಗಿತ್ತು. ಅಲ್ಲಿ ನೀರಾಗಲಿ, ಆಹಾರವಾಗಲಿ ಒದಗುವ ಸಂಭವವೇ ಇರಲಿಲ್ಲ. ಅಲ್ಲಿಂದ ಎಷ್ಟೋ ಮೈಲುಗಳ ದೂರದ ವರೆಗೆ ಜನವಾಸವೇ ಇರಲಿಲ್ಲ. ಹ. ಇಬ್‌ರಾಹೀಮ್‌ರು(ಅ) ಅಲ್ಲಿಯ ವರೆಗೂ ಬಂದು ಅವರಿಬ್ಬರನ್ನು ಬಿಟ್ಟು ಹಿಂದಿರುಗುವಾಗ 'ನೀವು ನಮ್ಮನ್ನು ಇಲ್ಲಿ ಬಿಟ್ಟು ಎಲ್ಲಿಗೆ ಹೋಗುತ್ತೀರಿ?' ಎಂದು ಹಾಜಿರಾ(ಅ) ಕೇಳಿದರು. ಆದರೆ ಅವರು ಉತ್ತರ ಕೊಡದೆ ಮುಂದೆ ಸಾಗುತ್ತಿದ್ದರು. ಹ. ಹಾಜಿರಾ(ರ) ಪದೇ ಪದೇ ಆ ಪ್ರಶ್ನೆಯನ್ನು ಆವರ್ತಿಸಿದರೂ ಹ. ಇಬ್‌ರಾಹೀಮ್(ಅ) ಮೌನವಾಗಿದ್ದಾಗ ಕೊನೆಗೆ 'ನೀವು ಅಲ್ಲಾಹನ ಅಪ್ಪಣೆಯಂತೆ ಹೀಗೆ ಬಿಟ್ಟು ಹೋಗುತ್ತಿರುವಿರಾ? ಎಂದು ಕೇಳಿದರು. ಆಗ ಹ. ಇಬ್‌ರಾಹೀಮ್(ಅ) ಹೌದೆಂದಾಗ ಆ ಮಹಿಳಾಮಣಿಯು, "ಹಾಗಿದ್ದರೆ ಹೋಗಿರಿ. ಅಲ್ಲಾಹನು ನಮ್ಮನ್ನು ಕೈಬಿಡಲಾರ" ಎನ್ನುತ್ತಾ ನಿಶ್ಚಿಂತರಾಗಿ ಅಲ್ಲಾಹನ ಮೇಲೆ ಸಂಪೂರ್ಣ ಭರವಸೆಯಿಟ್ಟು ಪತಿಯನ್ನು ಬೀಳ್ಕೊಟ್ಟರು. ಆ ಕಣಿವೆಯನ್ನು ದಾಟಿ ಹೋದ ಬಳಿಕ ತಿರುಗಿ ಆ ಕಣಿವೆಯ ಕಡೆಗೆ ಮುಖ ಮಾಡಿ ನಿಂತು ಹ. ಇಬ್‌ರಾಹೀಮ್(ಅ) ಹೀಗೆ ಪ್ರಾರ್ಥಿಸಿದರು-

"ಪ್ರಭೂ! ನಾನು ನನ್ನ ಸಂತತಿಯ ಒಂದು ಭಾಗವನ್ನು ಈ ಬಂಜರು ಕಣಿವೆಯಲ್ಲಿ ನಿನ್ನ ಪ್ರತಿಷ್ಠಿತ ಭವನದ ಬಳಿ ನೆಲೆಸಲು ತಂದು ಬಿಟ್ಟಿದ್ದೇನೆ. ಒಡೆಯಾ! ಇಲ್ಲಿ ನಮಾಝ್ ಸಂಸ್ಥಾಪಿಸಲಿಕ್ಕಾಗಿ ನಾನು ಹೀಗೆ ಮಾಡಿದೆ. ಆದುದರಿಂದ ಜನರ ಹೃದಯಗಳು ಅವರ ಕಡೆಗೆ ಆಕರ್ಷಿಸಲ್ಪಡುವಂತೆ ಮಾಡು ಮತ್ತು ಅವರಿಗೆ ಫಲಗಳ ಆಹಾರವನ್ನೊದಗಿಸು."

ಎಷ್ಟೊಂದು ಉನ್ನತ ಮಟ್ಟದ ಸಮರ್ಪಣಾಭಾವವಿದು! ಸರ್ವಲೋಕಗಳ ಪಾಲಕನಾದ ಅಲ್ಲಾಹನ ಸೂಚನೆ ಸಿಕ್ಕಿದೊಡನೆ ಪತ್ನಿ ಮತ್ತು ಮುದ್ದುಮಗುವನ್ನು ನೂರಾರು ಮೈಲುಗಳ ದೂರದಲ್ಲಿರುವ ಈ ನಿರ್ಜನ ಹಾಗೂ ಬಂಜರು ಕಣಿವೆಯಲ್ಲಿ ತಂದು ಬಿಟ್ಟು, ಶಾಂತ ಚಿತ್ತದಿಂದ ಮರಳಬೇಕಾದರೆ ಅವರಿಗೆ ಅಲ್ಲಾಹನ ಮೇಲೆ ಎಷ್ಟೊಂದು ಅಚಲ ಹಾಗೂ ಉನ್ನತ ಮಟ್ಟದ ಭರವಸೆ ಇದ್ದಿರಬಹುದು. ತನ್ನನ್ನೂ ತನ್ನ ಶಿಶುವನ್ನೂ ಅಲ್ಲಾಹನ ಆಜ್ಞೆ ಪ್ರಕಾರವೇ ಈ ಸ್ಥಳಕ್ಕೆ ತಂದು ಬಿಡಲಾಗಿದೆಯೆಂದು ತಿಳಿದಾಗ ಆ ಅಬಲೆಯೂ ಸಮಾಧಾನ ಪಡಬೇಕಾದರೆ ಆ ಸಾಧ್ವಿಮಣಿಗೆ ಅಲ್ಲಾಹನ ಮೇಲಿದ್ದ ವಿಶ್ವಾಸವು ಎಷ್ಟೊಂದು ಗಾಢವಾಗಿರಬೇಕು!

ತಂದಿದ್ದ ನೀರು ಮತ್ತು ಖರ್ಜೂರ ಮುಗಿಯಿತು. ತಾಯಿ ಮಗು ಇಬ್ಬರೂ ಹಸಿವು ಬಾಯಾರಿಕೆಗಳಿಂದ ಕಂಗೆಟ್ಟರು. ಹ. ಹಾಜಿರಾ(ಅ) ತನ್ನ ಶಿಶುವನ್ನು, ಈಗ ಝಮ್ ಝಮ್ ಇರುವ ಸ್ಥಳದಲ್ಲಿ ಮಲಗಿಸಿ ಸಮೀಪದ ಸಫಾ ಬೆಟ್ಟದ ಮೇಲೆ ಹತ್ತಿದರು. ಯಾರಾದರೂ ಸಹಾಯಕ್ಕೆ ಸಿಕ್ಕಿಯಾರೆ ಎಂದು ನಾಲ್ಕೂ ದಿಕ್ಕಿಗೆ ದೃಷ್ಟಿ ಹಾಯಿಸಿ ನೋಡತೊಡಗಿದರು. ಯಾರನ್ನೂ ಕಾಣದಾದಾಗ ಅಲ್ಲಿಂದ ಇಳಿದು ಮರ್ವಾ ಬೆಟ್ಟದ ಕಡೆಗೆ ಓಡಿ ಅದರ ಮೇಲೇರಿ ನೋಡಿದರು. ಹೀಗೆ ಆ ಎರಡೂ ಬೆಟ್ಟಗಳ ನಡುವೆ ಏಳು ಬಾರಿ ಓಡಾಡಿದರು. ಕೊನೆಯ ಬಾರಿ ಮರ್ವಾ ಬೆಟ್ಟದ ಮೇಲಿದ್ದಾಗ ಒಂದು ಸ್ವರ ಕೇಳಿ ಬಂತು. ಇದು ಮನುಷ್ಯನ ಸ್ವರವಾಗಿರಬಹುದೆಂಬ ಸಂದೇಹವೇ ಅವರಿಗೆ ಉಂಟಾಗಲಿಲ್ಲ. ಕಿವಿಗೊಟ್ಟು ಆಲಿಸತೊಡಗಿದರು. ಅದೇ ಸ್ವರ ಪುನಃ ಕೇಳಿಸಿತು. ಮಗುವನ್ನು ಮಲಗಿಸಿ ಬಂದಿದ್ದ ಜಾಗದ ಕಡೆಗೆ ನೋಡಿದರು. ಅಲ್ಲಿ ಒಂದು ವ್ಯಕ್ತಿ ನಿಂತಿತ್ತು. ಅದು ವಾಸ್ತವದಲ್ಲಿ ಅಲ್ಲಾಹನ ಮಲಕ್ (ದೇವಚರ) ಆಗಿದ್ದರು. ದೇವಚರ ನೆಲಕ್ಕೆ ತನ್ನ ಪಾದವನ್ನು ಹೊಡೆದಾಗ ಪಕ್ಕನೆ ಅಲ್ಲೊಂದು ನೀರಿನ ಬುಗ್ಗೆ ಉಕ್ಕಿ ಬಂತು. ಆ ದೇವಚರನು ಹ. ಹಾಜಿರಾರೊಡನೆ(ಅ), "ಚಿಂತಿಸಬೇಡಿ- ಅಲ್ಲಾಹನು ನಿಮ್ಮನ್ನು ಕಾಪಾಡುವನು. ಇಲ್ಲಿ ದೇವಭವನವೊಂದು ನಿರ್ಮಾಣವಾಗಲಿದೆ. ಅದನ್ನು ನಿಮ್ಮ ಮಗನೂ ಅವನ ತಂದೆಯೂ ಸೇರಿ ಕಟ್ಟಲಿರುವರು" ಎಂದರು.

ಹಜ್ಜ್ ಮತ್ತು ಉಮ್ರಾ ವೇಳೆಯಲ್ಲಿ ಈ ಸಫಾ ಮತ್ತು ಮರ್ವಾಗಳ ಓಡಾಟವು ಆ ಘಟನೆಯ ಸ್ಮರಣೆಯಾಗಿದೆ. ಹ. ಹಾಜಿರಾರು(ಅ) ತನ್ನ ಓಡಾಟವನ್ನು ಸಫಾ ಬೆಟ್ಟದಿಂದ ಪ್ರಾರಂಭಿಸಿದರು. ಆದುದರಿಂದ ನಮ್ಮ ಓಟವೂ ಅಲ್ಲಿಂದಲೇ ಪ್ರಾರಂಭವಾಗುತ್ತದೆ. ಅವರು ಏಳುಬಾರಿ ನಡೆದಿದ್ದರು. ನಾವೂ ಏಳು ಬಾರಿ ನಡೆಯುತ್ತೇವೆ. ಅವರು ಈ ಓಡಾಟ ಮುಗಿದ ಬಳಿಕ ಬಂದು ನೀರು ಕುಡಿದಿದ್ದರು. ಏಕೆಂದರೆ ಅದಕ್ಕೆ ಮುಂಚೆ ಅಲ್ಲಿ ಈ ನೀರು ಇರಲಿಲ್ಲ. ನಾವು ಪವಾಡ ಸದೃಶವಾಗಿ ಉಕ್ಕಿ ಬಂದ ಈ ನೀರನ್ನು ಸಈಗಿಂತ ಮುಂಚೆ ಕುಡಿಯುತ್ತೇವೆ. ಏಕೆಂದರೆ ಈಗ ಅದು ಇದೆ. ಈ ಕಾರ್ಯಗಳನ್ನೆಲ್ಲ ನಾವು ಹ. ಹಾಜಿರಾರ(ಅ) ಅನುಕರಣೆ ಮಾಡುತ್ತ ನೆರವೇರಿಸುತ್ತೇವೆ. ನಮ್ಮಲ್ಲೂ ಹ. ಇಬ್ರಾಹೀಮ್ ಮತ್ತು ಹಾಜಿರರಲ್ಲಿದ್ದಂತಹ(ಅ) ಅತ್ಯದ್ಭುತ ಹಾಗೂ ಅಚಂಚಲ ವಿಶ್ವಾಸ, ಸಮರ್ಪಣಾಭಾವ

ಮತ್ತು ಭರವಸೆಗಳನ್ನುಂಟು ಮಾಡಿಕೊಳ್ಳುವುದೇ ಇದರ ಜೀವಾಳ. ಯಾವ ಕಾರ್ಯವೇ ಆಗಿರಲಿ, ಅದು ಅಲ್ಲಾಹನ ಅಪ್ಪಣೆಯೆಂದು ತಿಳಿದೊಡನೆ ಅದನ್ನು ನೆರವೇರಿಸಲು ಯಾವ ಅಪಾಯದ ಭಯವೂ ಇರಬಾರದು. ಅವನ ಆಜ್ಞಾಪಾಲನೆಯಲ್ಲೇ ನಮಗೆ ಶ್ರೇಯಸ್ಸಿದೆ ಎಂಬ ಪಾಠವನ್ನು ನಾವು ಇಲ್ಲಿಂದ ಪಡೆಯಬೇಕು. ಹಾಗೆ ಪಡೆದವರು ಈ ಝಮ್ ಝಮ್ ಮತ್ತು ಸಫಾ-ಮರ್ವಾಗಳ ನಡುವಿನ ಓಡಾಟದಲ್ಲಿ ಸಿಗುವ ಆಧ್ಯಾತ್ಮಿಕ ಲಾಭಗಳನ್ನು ಬಾಚಿಕೊಂಡರೆಂದೇ ಅರ್ಥ. ಈ ವಿಧಿ ಕರ್ಮಗಳನ್ನು ನೆರವೇರಿಸುತ್ತಿರುವಾಗಲೂ ಅಲ್ಲಾಹನ ದಿಕ್ರ್ ಮತ್ತು ದುಆ(ಪ್ರಾರ್ಥನೆ)ಗಳು ಬಾಯಿಯಿಂದ ಹೊರಡುತ್ತಿರಬೇಕು. ಝಮ್ ಝಮ್ ನೀರು ಕುಡಿದೊಡನೆ ಫಲದಾಯಕ ಜ್ಞಾನವನ್ನೂ ಸಕಲ ರೋಗಗಳಿಂದ ಗುಣವನ್ನೂ ದಯಪಾಲಿಸಲಿಕ್ಕಾಗಿ ಅಲ್ಲಾಹನೊಡನೆ ಪ್ರಾರ್ಥಿಸಬೇಕು.

## ಹಜ್ಜ್ ದಿನಗಳ ನಿರೀಕ್ಷೆಯಲ್ಲಿ

ಉಮ್ರಾ ಮಾಡಿ ಹಲಾಲ್ ಆದ ಬಳಿಕ ಹಜ್ಜ್‌ನ ದಿನಗಳನ್ನು ಇದಿರು ನೋಡುತ್ತ ಮಕ್ಕಾ ನಗರದಲ್ಲೇ ತಂಗಿರುವ ಕಾಲದಲ್ಲಿ, ಅಮೂಲ್ಯವಾದ ಸಮಯವನ್ನು ವ್ಯರ್ಥವಾಗಿ ಹಾಳುಮಾಡಬಾರದು. ಉತ್ತಮ ಕಾರ್ಯಕ್ರಮವನ್ನು ರೂಪಿಸಿ ಅದನ್ನು ಕಾರ್ಯಗತಗೊಳಿಸಲು ಶ್ರಮಿಸಬೇಕು. ಉದಾ:-

ದಿನಂಪ್ರತಿ ಕಡ್ಡಾಯ ನಮಾಝ್‌ಗಳನ್ನು ಕಅಬಾದ ಹರಮಿನಲ್ಲೇ ಸಾಮೂಹಿಕವಾಗಿ ಮಾಡುತ್ತಿರಬೇಕು. ಆದಷ್ಟು ಹೆಚ್ಚು ನಫಿಲ್ ನಮಾಝ್‌ಗಳನ್ನು ಮಾಡುತ್ತಿರಬೇಕು. ಮಸೀದಿಯೊಳಗೆ ಪ್ರವೇಶಿಸುವಾಗ 'ಇಅ್‌ತಿಕಾಫ್'ನ ನಿಯ್ಯತ್ ಮಾಡಿಕೊಂಡೇ ಪ್ರವೇಶಿಸಬೇಕು. ಇದು ನಫಿಲ್ 'ಇಅ್‌ತಿಕಾಫ್' ಆಗಿದ್ದು ಇದಕ್ಕೆ ಉಪವಾಸ ಮತ್ತು ನಿಶ್ಚಿತ ಕಾಲಗಳ ನಿಬಂಧನೆಯಿಲ್ಲ. ಸಾಧ್ಯವಿದ್ದಷ್ಟು ಹೆಚ್ಚು ತವಾಫ್‌ಗಳನ್ನು ಮಾಡಬೇಕು. ಏಕೆಂದರೆ ಹರಮಿನಲ್ಲಿ ಅತಿ ಶ್ರೇಷ್ಠ ಇಬಾದತ್ 'ತವಾಫ್' ಆಗಿದೆ. ಇದು ನಫಿಲ್ ತವಾಫ್ ಆಗಿರುವುದರಿಂದ ಇದಕ್ಕೆ ಇಹ್ರಾಮ್ ಬೇಕಾಗಿಲ್ಲ. ರಮ್ಲ್, ಇಝ್ತಿಬಾಅ್ ಮತ್ತು ಸಈಗಳೂ ಬೇಡ.

ಸಾಧ್ಯವಿದ್ದರೆ ಉಮ್ರಾಗಳನ್ನೂ ಮಾಡಬಹುದು. ಇಂತಹ ಉಮ್ರಾಕ್ಕಾಗಿ 'ತನ್‌ಈಮ್'ಗೆ ಹೋಗಿ ಇಹ್ರಾಮ್ ಕಟ್ಟಿ ಬರಬೇಕಾಗುತ್ತದೆ. ಮಸ್ಜಿದುಲ್ ಹರಾಮ್‌ನ ಹೊರಗೆ ಟ್ಯಾಕ್ಸಿ, ಬಸ್ಸುಗಳು ಸಿಗುತ್ತದೆ. ಆದರೆ ಉಮ್ರಾಕ್ಕಿಂತ ತವಾಫ್ ಮಾಡುವುದೇ ಉತ್ತಮ.

ಹರಮಿನಲ್ಲಿ ಒಮ್ಮೆಯಾದರೂ ಸಂಪೂರ್ಣ ಕುರ್‌ಆನನ್ನು ಓದಲು ಪ್ರಯತ್ನಿಸಬೇಕು. ಹೆಚ್ಚು ಓದಿದರೆ ಇನ್ನೂ ಉತ್ತಮ. ಪುಣ್ಯ ಕಾರ್ಯಗಳನ್ನೆಸಗುವ ಯಾವ ಸಂದರ್ಭವನ್ನೂ ಕಳೆದುಕೊಳ್ಳಬಾರದು. ಏಕೆಂದರೆ ಹರಮಿನಲ್ಲಿ ಮಾಡುವ ಪ್ರತಿಯೊಂದು ಪುಣ್ಯಕಾರ್ಯದ ಫಲವು ಒಂದು ಲಕ್ಷ ಪಟ್ಟಾಗಿರುತ್ತದೆ. ಹರಮಿನಲ್ಲಿ ವಿಶಿಷ್ಟ ಸ್ಥಾನಗಳಲ್ಲಿ ನಫಿಲ್ ನಮಾಝ್‌ಗಳನ್ನು ಮಾಡುತ್ತಲೇ ಇರಬೇಕು.

ಪ್ರತಿಕೂಲ ಹವಾಗುಣದಿಂದಾಗಿ ಅಥವಾ ಮಳೆ, ಕಠಿಣ ಸೆಕೆ ಇತ್ಯಾದಿಗಳಿಂದಾಗಿ ಹರಮಿನಲ್ಲಿರಲು ಮತ್ತು ತವಾಫ್, ಕಅಬಾದ ಸಂದರ್ಶನಾದಿಗಳನ್ನು ಮಾಡಲು ಕಷ್ಟ ವಾದರೂ ಸಹಿಸಿಕೊಳ್ಳಬೇಕು. ಇಂತಹ ಸಂದರ್ಭಗಳು ಯಾವಾಗಲೂ ಸಿಗುವುದಿಲ್ಲವಷ್ಟೆ. ಕಷ್ಟ ಸಹಿಸಿ ಮಾಡುವ ಪುಣ್ಯಕಾರ್ಯಗಳಿಗೆ ಪುಣ್ಯಫಲವೂ ಹೆಚ್ಚು ಸಿಗುವುದು.

ಹತೀಮ್‌ನೊಳಗೆ ಹೋಗಿ ಮೀಝಾಬ್ ರಹ್ಮತ್‌ನ ಕೆಳಗೆ ನಮಾಝ್ ಮಾಡುವ ಮತ್ತು ಕಅಬಾದ ಗೋಡೆಗೆ ತಾಗಿ ಕುಳಿತುಕೊಳ್ಳುವ ಅವಕಾಶ ಸಿಕ್ಕಿದರೆ ಅದನ್ನೂ ಬಿಡಬಾರದು.

ನಮಾಝ್, ತವಾಫ್ ಮೊದಲಾದ ಇಬಾದತ್‌ಗಳಿಂದಾಗಿ ದಣಿವಾದಾಗ ಕೂತಲ್ಲಿಂದಲೇ ಕಅಬಾವನ್ನು ನೋಡುತ್ತಿರಬೇಕು. ಅಲ್ಲಾಹನ ಭವನವನ್ನು ನೋಡುವುದೂ ಇಬಾದತ್ ಆಗಿರುತ್ತದೆ.

ಸೌಭಾಗ್ಯವಶಾತ್ ಕಅಬಾದ ಒಳಗೆ ಪ್ರವೇಶಿಸುವ ಅವಕಾಶ ಸಿಕ್ಕಿದರೆ, ಅದನ್ನು ಕಳೆದುಕೊಳ್ಳಬಾರದು. ಪ್ರವೇಶಿಸುವಾಗ ಅತ್ಯಂತ ಭಯಭಕ್ತಿ ಮತ್ತು ಏಕಾಗ್ರತೆಯಿಂದ ದೇಹಲಿಯನ್ನು ಚುಂಬಿಸಬೇಕು. ಮೊದಲು ಬಲಗಾಲನ್ನಿಡುತ್ತ, ಮಸೀದಿಯೊಳಗೆ ಪ್ರವೇಶಿಸುವಾಗ ಪಠಿಸುವ ದುಆ ಹೇಳಬೇಕು. ಒಳಗೆ ಹೋಗಿ ಆಚೀಚೆ ನೋಡುವುದು ಸರಿಯಲ್ಲ... ಬಾಗಿಲಿನಿಂದ ಒಳಗೆ ಮುಂದಿನ ಗೋಡೆಯ ಕಡೆಗೆ ನೇರಾಗಿ ನಡೆದು ಸುಮಾರು ಮೂರು ಮೊಳದಷ್ಟು ದೂರದಲ್ಲಿ ನಿಂತು ಬಿಡಬೇಕು. ಇದುವೇ ಪ್ರವಾದಿವರ್ಯರ(ಸ) ಮುಸಲ್ಲಾ. ಇಲ್ಲಿ ಕಡಿಮೆಪಕ್ಷ ಎರಡು ರಕಅತ್ ನಮಾಝ್ ಮಾಡಿ ಮುಂದಿನ ಗೋಡೆಗೆ ತನ್ನ ಗಲ್ಲವನ್ನು ತಾಗಿಸಿ ಅಲ್ಲಾಹನ ಸ್ತುತಿಸ್ತೋತ್ರ ಗೈಯಬೇಕು. ತನಗಾಗಿ, ತನ್ನವರಿಗಾಗಿ ಮತ್ತು ಸಕಲ ಸತ್ಯವಿಶ್ವಾಸಿಗಳಿಗಾಗಿ ಪ್ರಾರ್ಥಿಸಬೇಕು. ಅಲ್ಲಿಂದ ಇತರ ಮೂಲೆಗಳಿಗೂ ಹೋಗಿ ಅಲ್ಲೂ ಹಮ್ದ್, ಸನಾ, ತೌಬಾ, ಇಸ್ತಿಗ್‌ಫಾರ್ ಮತ್ತು ದುಆಗಳನ್ನು ಮಾಡಬೇಕು. ಒಳಗೆ ಇರುವಷ್ಟು ಕಾಲವೂ ಭಕ್ತಿ ಏಕಾಗ್ರತೆಗಳೊಂದಿಗಿರಬೇಕು. ಹೊರಗೆ ಬರುವಾಗ ಆ ಸಂದರ್ಭದ ದುಆ ಹೇಳುತ್ತಾ ಬರಬೇಕು.

ಮಕ್ಕಾ ನಗರದಲ್ಲಿರುವಾಗ ಒಮ್ಮೊಮ್ಮೆ ಇತರ ಪವಿತ್ರ ಸ್ಥಳಗಳನ್ನೂ ಸಂದರ್ಶಿಸಬೇಕು, ದುಆ ಸ್ವೀಕೃತವಾಗುವ ಸ್ಥಳಗಳಿಗೆ ಹೋದಾಗಲೆಲ್ಲಾ ಹಮ್ದ್, ಸನಾ, ತೌಬಾ, ಇಸ್ತಿಗ್‌ಫಾರ್, ದುಆ, ಸಲಾತ್‌ಗಳನ್ನು ಹೇಳುತ್ತಲೇ ಇರಬೇಕು. ಏಳುವಾಗಲೂ, ಕೂರುವಾಗಲೂ, ಚಲಿಸುವಾಗಲೂ ತಸ್ಬೀಹ್, ತಹ್ಲೀಲ್, ಸಲಾತ್ ಮತ್ತು ಇಸ್ತಿಗ್‌ಫಾರ್ ಹೇಳುತ್ತಿರಬೇಕು.

ಮಕ್ಕಾ ನಿವಾಸಿಗಳೊಂದಿಗೆ ಸದಾ ಒಳ್ಳೆಯ ರೀತಿಯಿಂದ ವರ್ತಿಸಬೇಕು.

## ಮಕ್ಕಾ ನಗರದ ಸಂದರ್ಶನಾರ್ಹ ಸ್ಥಳಗಳು

**ಮನೆಗಳು:** ಮಕ್ಕಾದಲ್ಲಿ ಸತ್ಯವಿಶ್ವಾಸಿಗಳ ಮಾತೆ ಹ. ಖದೀಜಾರ(ರ) ಮನೆ ಮುಖ್ಯವಾದುದು. ಅಲ್ಲೇ ಹ. ಫಾತಿಮಾ(ರ) ಮತ್ತು ಇತರ ಪುತ್ರಿಯರು ಜನಿಸಿದರು.

ಹಿಜ್ರತ್‌ನ ವರೆಗೂ ಪ್ರವಾದಿವರ್ಯರು(ಸ) ಅಲ್ಲೇ ವಾಸಿಸಿದ್ದರು. ಮರ್ವಾ ಬೆಟ್ಟದ ಬಲ ದಿಕ್ಕಿಗೆ ಎತ್ತರದಲ್ಲೊಂದು ಪೇಟೆ ಇದೆ. ಈ ಪೇಟೆಯ ಓಣಿಯಲ್ಲಿ ಸರಾಫರ ಅಂಗಡಿಗಳಿವೆ.

ಎರಡನೆಯದು, ಪ್ರವಾದಿವರ್ಯರ(ಸ) ಜನ್ಮಸ್ಥಳ. ಇದು ಶಿಅಬ್ ಅಬೀತಾಲಿಬ್ (ಅಬೂತಾಲಿಬ್ ಕಣಿವೆ) 'ಕಶಾಶಿಯ' ಮೊಹಲ್ಲಾದ 'ಸೂಕುಲ್ಲೈಲ್' (ರಾತ್ರಿಪೇಟೆ) ಎಂಬ ಓಣಿಯಲ್ಲಿದೆ. ಈಗ ಅದರಲ್ಲಿ ಮುಕ್ತಬತುಲ್ ಹರಮ್ (ಪುಸ್ತಕ ಭಂಡಾರ) ಮತ್ತು ಒಂದು ಶಾಲೆ ಇದೆ. ಹೊಸ ಬಡಾವಣೆಯಲ್ಲಿ ಈ ಮನೆಯು ಮಾರ್ಗದ ಬದಿಗೇ ಬಂದಿದೆ. ಈ ಬೀದಿಯ ಹೆಸರು ಶಾರಿಅ್ ಮಲಿಕ್ ಸಊದ್.

ಮೂರನೆಯದು, ಹ. ಅಬೂಬಕರ್ ಸಿದ್ದೀಕ್‌ರ(ರ) ಮನೆ. ಇದು 'ಝುಕಾಕ್ ಸವಾಗೀನ್' ಎಂಬಲ್ಲಿದೆ.

ನಾಲ್ಕನೆಯದು, ಹ. ಅಲೀಯವರ(ರ) ಜನ್ಮಸ್ಥಳ. ಇದು ಶಿಅಬ್ ಅಬೀತಾಲಿಬ್‌ನಲ್ಲಿ ಪ್ರವಾದಿವರ್ಯರ(ಸ) ಜನ್ಮಸ್ಥಳದ ಹತ್ತಿರವೇ ಇದೆ.

ಐದನೆಯದು, 'ದಾರುಲ್ ಅರ್ಕಮ್' ಇದು ಸಫಾ ಬೆಟ್ಟದ ಕಡೆಗಿರುವ ಮೊದಲನೆಯ ಬಾಗಿಲಿನ ಮುಂದೆ ಇದೆ. ಆ ಬಾಗಿಲಿನ ಕಮಾನಿನ ಮೇಲೆ 'ದಾರುಲ್ ಅರ್ಕಮ್' ಎಂದು ಬರೆಯಲಾಗಿದೆ. ಹ. ಉಮರ್‌ರು(ರ) ಇಸ್ಲಾಮ್ ಸ್ವೀಕರಿಸಿದ್ದ ಸ್ಥಳ ಇದುವೆ. ಮನೆಯ ಮುಖ್ಯ ಭಾಗವು ಹರಮಿನ ಕಟ್ಟಡದೊಳಗೆ ಸೇರಿ ಹೋಗಿದೆಯೆಂದು ಕೆಲವರು ಹೇಳುತ್ತಾರೆ.

ಆರನೆಯದು. ಹ. ಹಮ್‌ಝಾರ(ರ) ಜನ್ಮಸ್ಥಳ. ಇದು 'ಮಸ್ಫಲ' ಮೊಹಲ್ಲದಲ್ಲಿತ್ತು. ಈಗ ಅಲ್ಲೊಂದು ಮಸೀದಿ ಇದೆ.

## ಕಬರಸ್ತಾನ

"ಜನ್ನತುಲ್ ಮಅ್‌ಲಾ" ಎಂಬುದು ಮಕ್ಕಾದ ಕಬರಸ್ಥಾನ. ಇದು ಮದೀನಾದ 'ಜನ್ನತುಲ್ ಬಕೀಅ್'ನ ನಂತರ ಜಗತ್ತಿನ ಅತಿ ಶ್ರೇಷ್ಠ ಕಬರಸ್ಥಾನ. ಬಿಡುವಿನ ಸಮಯ ಅದನ್ನು ಸಂದರ್ಶಿಸಬೇಕು. ಅದು ಈಗ ಎರಡು ಭಾಗಗಳಾಗಿವೆ. ಮಿನಾದ ಕಡೆಗೆ ಇರುವುದು ಹಳೆಯದು. ಮಕ್ಕಾದ ಕಡೆಗಿರುವ ಭಾಗ ಹೊಸತು. ಹಳೆಯಭಾಗದಲ್ಲಿ ಉಮ್ಮುಲ್ ಮೂಮಿನೀನ್ ಹ. ಖದೀಜಾರ(ರ) ಸಮಾಧಿ ಇದೆ. ಇದಲ್ಲದೆ ಇತರ ಅನೇಕ ಸಹಾಬಿಗಳ, ತಾಬಈಗಳ ಮತ್ತು ಮಹಾತ್ಮರ ಸಮಾಧಿಗಳೂ ಇವೆ.

ಕಬರಸ್ತಾನವನ್ನು ಸಂದರ್ಶಿಸಲು ಹೋದಾಗ ಸಮಾಧಿಯ ಬಳಿ ಜಾಗವಿದ್ದರೆ ಕಿಬ್ಲಾದ ಕಡೆಗೆ ಮುಖಮಾಡಿ ನಿಂತು ಹೀಗೆ ಸಲಾಮ್ ಹೇಳಬೇಕು.

اَلسَّلَامُ عَلَيْكُمْ دَارَ قَوْمٍ مُؤْمِنِينَ وَاِنَّا اِنْ شَاءَ اللّٰهُ بِكُمْ
لَاحِقُونَ وَنَسْأَلُ اللّٰهَ لَنَا وَلَكُمُ الْعَافِيَة

"ಅಸ್ಸಲಾಮು ಅಲೈಕುಮ್ ದಾರಕೌಮಿನ್ ಮುಅ್‌ಮಿನೀನ ವ ಇನ್ನಾ ಇನ್‌ಶಾ ಅಲ್ಲಾಹು ಬಿಕುಮ್ ಲಾಹಿಕೂನ್ ವ ನಸ್‌ಅಲುಲ್ಲಾಹ ಲನಾ ವಲಕುಮುಲ್ ಆಫಿಯ."

(ಓ ಸತ್ಯವಿಶ್ವಾಸಿಗಳ ನಾಡಿನವರೇ! ನಿಮಗೆ ರಕ್ಷಣೆ ಇರಲಿ, ಅಲ್ಲಾಹನು ಇಚ್ಛಿಸಿದರೆ ನಾವೂ ನಿಮ್ಮನ್ನು ಬಂದು ಸೇರುವೆವು ಮತ್ತು ನಾವು ನಮಗಾಗಿಯೂ ಎಲ್ಲರಿಗಾಗಿಯೂ ಅಲ್ಲಾಹನೊಡನೆ ಕ್ಷೇಮವನ್ನು ಯಾಚಿಸುತ್ತೇವೆ.) ಅನಂತರ ನಿಂತುಕೊಂಡು ಅಥವಾ ಕುಳಿತುಕೊಂಡು ಅಲ್ಲಾಹನಲ್ಲಿ ಪ್ರಾರ್ಥಿಸಬೇಕು.

ಸಮಾಧಿಯ ಮೇಲೆ ಕುಳಿತುಕೊಳ್ಳುವುದು, ನಡೆಯುವುದು, ಸಮಾಧಿಗೆ ಒರಗುವುದು ಇವೆಲ್ಲ ನಿಷಿದ್ಧ. ಅದರ ಮೇಲೆ ಹಣ ಚೆಲ್ಲಬಾರದು. ಅಲ್ಲಿನ ಸೇವಕರಿಗೆ ಹಾಗೂ ಪರಿಚಾರಕರಿಗೆ ಏನಾದರೂ ಕೊಡುವುದಿದ್ದರೆ ಅವರ ಕೈಯಲ್ಲೇ ಕೊಡಬೇಕು. ಗೋರಿಗಳ ಮೇಲೆ ಚೆಲ್ಲಿದ ಹಣವನ್ನು ಅವರೇ ತೆಗೆದು ಖರ್ಚು ಮಾಡುತ್ತಾರಾದರೂ ಆ ಹಣ ಅವರಿಗೆ ಧರ್ಮಸಮ್ಮತವಾಗುವುದಿಲ್ಲ. ಇದಕ್ಕೆ ನಾವು ಕಾರಣರಾಗಬಾರದು.

## ಮಸೀದಿಗಳು

'ಮಸ್ಜಿದುಲ್ ಹರಾಮ್'ನ ಹೊರತಾಗಿ, ಆಸುಪಾಸಿನಲ್ಲಿ ಸಂದರ್ಶಿಸತಕ್ಕ ಅನೇಕ ಮಸೀದಿಗಳಿವೆ. ಸಂದರ್ಭ ಸಿಕ್ಕಿದರೆ ಅಲ್ಲಿ ಹೋಗಿ ನಫಿಲ್ ನಮಾಝ್ ಮಾಡಬಹುದು. ಹಾಗೆ ನಮಾಝ್ ಮಾಡುವಾಗ ಅದು ನಿಷಿದ್ಧ ಹಾಗೂ ಮಕ್ರೂಹ್ ಸಮಯವಾಗಿರದಂತೆ ನೋಡಿ ಕೊಳ್ಳಬೇಕು. ಈ ಸಂದರ್ಶನಗಳಿಂದಾಗಿ ಮಸ್ಜಿದುಲ್ ಹರಾಮ್‌ನ ಸಾಮೂಹಿಕ ನಮಾಝ್ ತಪ್ಪಿ ಹೋಗದಂತೆ ನೋಡಿಕೊಳ್ಳಬೇಕು.

1) ಮಸ್ಜಿದುರ್ರಾಯ: ಪ್ರವಾದಿವರ್ಯರು(ಸ) ಮಕ್ಕಾ ವಿಜಯದಂದು ತಮ್ಮ ಧ್ವಜವನ್ನು ಇಲ್ಲಿ ನಾಟಿದ್ದರು. ಇದು ಜನ್ನತುಲ್ ಮಅ್‌ಲಾದ ದಾರಿಯಲ್ಲಿದೆ.
2) ಮಸ್ಜಿದ್ ಜಿನ್ನ್: ಜಿನ್ನ್‌ಗಳು (ಯಕ್ಷರು) ಇಲ್ಲಿ ಹಾಜರಾಗಿ, ಪ್ರವಾದಿ ವರ್ಯರ(ಸ) ಬಾಯಿಯಿಂದ ಕುರ್‌ಆನ್ ಕೇಳಿ ಇಸ್ಲಾಮ್ ಸ್ವೀಕರಿಸಿದ್ದರು.
3) ಮಸ್ಜಿದ್ ತನ್‌ಈಮ್: ಅಥವಾ ಮಸ್ಜಿದ್ ಆಯಿಶಾ. ಇದು ಮಕ್ಕಾದ ಉತ್ತರಕ್ಕೆ ಸುಮಾರು 6 ಕಿ.ಮೀ. ದೂರದಲ್ಲಿದೆ. ಇಲ್ಲಿಂದಲೇ ಉಮ್ರಾ ಮಾಡಲು ಇಹ್ರಾಮ್ ಕಟ್ಟಲಾಗುತ್ತದೆ.
4) ಮಸ್ಜಿದ್ ಗನಮ್ ಅಥವಾ ಅಲ್ ಇಜಾಬ:: ಇದು ಮಹ್ಸಬ್ ಕಣಿವೆಯ ಬಳಿ 'ಮುಆಬದಃ' ಮೊಹಲ್ಲಾದಲ್ಲಿದೆ.
5) ಮಸ್ಜಿದ್ ದೀ ತುವಾ: ಇದು ತನ್‌ಈಮ್‌ನ ದಾರಿಯಲ್ಲಿದೆ. ಪ್ರವಾದಿವರ್ಯರು(ಸ) ಇಹ್ರಾಮಿನ ಸ್ಥಿತಿಯಲ್ಲಿ ಇಲ್ಲಿ ತಂಗಿದ್ದರು.
6) ಮಸ್ಜಿದ್ ಖೈಫ್: ಇದು 'ಮಿನಾ'ದ ದೊಡ್ಡ ಮಸೀದಿ. ಇಲ್ಲಿ ಇಪ್ಪತ್ತು ಪ್ರವಾದಿಗಳು ಸಮಾಧಿಸ್ಥರಾಗಿದ್ದಾರೆಂದು ಹೇಳಲಾಗುತ್ತದೆ.

7) **ಮಸ್ಜಿದ್ ನಮಿರ:** ಇದು 'ಅರಫಾತ್'ನ ಬದಿಯಲ್ಲಿದೆ. ಇದನ್ನು 'ಮಸ್ಜಿದ್ ಇಬ್‌ರಾಹೀಮ್' ಎಂದೂ ಕರೆಯುತ್ತಾರೆ.

8) **ಮಸ್ಜಿದ್ ಮಶ್‌ಅರಿಲ್ ಹರಾಮ್:** ಇದು 'ಮುಝ್ದಲಿಫಾ'ದಲ್ಲಿ ಕರಖ್ ಬೆಟ್ಟದ ಬಳಿ ಇದೆ.

9) **ಮಸ್ಜಿದ್ ಅಬೂ ಕುಬೈಸ್:** ಇದು ಅಬೂ ಕುಬೈಸ್ ಬೆಟ್ಟದ ಮೇಲಿದೆ. ಇದನ್ನು ಮಸ್ಜಿದ್ ಬಿಲಾಲ್ ಎಂದೂ ಕರೆಯುತ್ತಾರೆ. ಚಂದ್ರನು ಸೀಳಾದ ಪವಾಡ ಇಲ್ಲೇ ಕಂಡು ಬಂದಿತ್ತೆಂದು ಪ್ರಸಿದ್ಧಿ ಇದೆ. ಇಲ್ಲಿ ಚಂದ್ರನನ್ನು ನೋಡಲಾಗುತ್ತಿದ್ದುದರಿಂದ ಇದು 'ಮಸ್ಜಿದ್ ಬಿಲಾಲ್' ಆಗಿರದೆ 'ಮಸ್ಜಿದ್ ಹಿಲಾಲ್' ಆಗಿದೆಯೆಂದೂ ಕೆಲವರು ಹೇಳುತ್ತಾರೆ.

10) **ಮಸ್ಜಿದ್ ಅಕಬ:** ಇದು ಮಿನಾದ ಸಮೀಪದಲ್ಲಿದ್ದು ಮಾರ್ಗದಿಂದ ಸ್ವಲ್ಪ ದೂರಕ್ಕೆ ಎಡ ಕಡೆಗಿದೆ.

11) **ಮಸ್ಜಿದುಲ್ ಕಬಶ್:** ಹ. ಇಬ್‌ರಾಹೀಮ್‌ರು(ಅ) ಹ. ಇಸ್ಮಾಈಲ್‌ರನ್ನು(ಅ) ಬಲಿಕೊಡಲು ಮಲಗಿಸಿದ್ದ ಸ್ಥಳವಿದು.

12) **ಮಸ್ಜಿದ್ ಜಇರ್ರಾನ:** ಇದು ಮಕ್ಕಾದಿಂದ ತಾಯಿಫ್‌ಗೆ ಹೋಗುವ ದಾರಿಯಲ್ಲಿದೆ. ಇಲ್ಲಿಂದಲೂ ಉಮ್ರಾಕ್ಕೆ ಇಹ್ರಾಮ್ ಕಟ್ಟುವುದು ಸುನ್ನತ್ ಆಗಿದೆ. ಆದರೆ ತನ್‌ಈಮ್‌ನಲ್ಲಿ ಕಟ್ಟುವುದು ಉತ್ತಮ.

## ಮಕ್ಕಾದ ವಿಶಿಷ್ಟ ಬೆಟ್ಟಗಳು

**ಜಬಲ್ ಸೌರ್:** ಇದು ಮಕ್ಕಾದಿಂದ 5 ಕಿ.ಮೀ ದೂರದಲ್ಲಿದೆ. ಪ್ರವಾದಿವರ್ಯರು(ಸ) ಹಿಜ್ರತ್ ಹೋಗುವ ದಾರಿಯಲ್ಲಿ ಹ. ಅಬೂಬಕರ್‌ರೊಂದಿಗೆ(ರ) ತಂಗಿದ್ದ ಗುಹೆ ಈ ಬೆಟ್ಟದಲ್ಲಿದೆ. ಗವಿಗೆ ಸುಮಾರು ಎರಡೂವರೆ ಕಿ.ಮೀ. ಹತ್ತಿಹೋಗಬೇಕಾಗುವುದು. ಸಾಮರ್ಥ್ಯ ಇದ್ದವರು ಅದನ್ನು ಸಂದರ್ಶಿಸಬೇಕು.

**ಜಬಲ್ ನೂರ್:** ಮಕ್ಕಾದಿಂದ ಮಿನಾಕ್ಕೆ ಹೋಗುವಾಗ ಇದು ಎಡಬದಿಗಿದೆ. ಈ ಬೆಟ್ಟದಲ್ಲಿ ಪ್ರಸಿದ್ಧ "ಹಿರಾ" ಗುಹೆ ಇದೆ. ಇದು ಪ್ರವಾದಿವರ್ಯರು(ಸ) ಪ್ರವಾದಿತ್ವಕ್ಕೆ ಮುಂಚೆ ಧ್ಯಾನಾಸಕ್ತರಾಗುತ್ತಿದ್ದ ಗುಹೆ. ಪ್ರಥಮ ವಹ್ಯ್ ಅವತೀರ್ಣಗೊಂಡದ್ದು ಇಲ್ಲೇ. ಇದಕ್ಕೆ ಅಷ್ಟು ಹತ್ತಬೇಕಾಗಿಲ್ಲ. ಸೌರ್ ಗುಹೆಗಿಂತ ಈ ಗುಹೆಗೆ ಹೋಗುವುದು ಸುಲಭ.

**ಜಬಲ್ ಅಬೂ ಕುಬೈಸ್:** ಇದು ಕಅಬಾದ ಪಕ್ಕದಲ್ಲೇ ಇದೆ. ನಗರವು ಅಲ್ಲಿಯ ವರೆಗೂ ವಿಸ್ತರಿಸಿದೆ. ಹ. ನೂಹ್‌ರ(ಅ) ಕಾಲದ ಜಲ ಪ್ರಳಯದ ವೇಳೆ "ಹಜರುಲ್ ಅಸ್ವದ"ನ್ನು ಇಲ್ಲಿ ಇರಿಸಲಾಗಿದ್ದರಿಂದ ಇದನ್ನು ಅಜ್ಞಾನ ಕಾಲದಲ್ಲಿ 'ಅಮೀನ್' ಎನ್ನಲಾಗುತ್ತಿತ್ತು. ಅಬೂ ಕುಬೈಸ್ ಎಂಬಾತ ಪ್ರಥಮತಃ ಇಲ್ಲಿ ಮನೆಕಟ್ಟಿದುದರಿಂದ ಅದಕ್ಕೆ ಈ ಹೆಸರು ಬಂತು.

## ದುಆ ಸ್ವೀಕೃತವಾಗುವ ಸ್ಥಳಗಳು

ಮಕ್ಕಾ ನಗರದ ಎಲ್ಲಾ ಕಡೆಗಳಲ್ಲೂ ದುಆ ಸ್ವೀಕೃತವಾಗುತ್ತದೆ. ಆದರೂ ಕೆಲವು ಸ್ಥಳಗಳು ಇಲ್ಲಿ ವಿಶಿಷ್ಟವಾಗಿದೆ.

ಒಂದು ವರದಿಯ ಪ್ರಕಾರ 'ಕಅಬಾ'ದ ಮೇಲೆ ಪ್ರಥಮ ದೃಷ್ಟಿ ಬಿದ್ದ ಕೂಡಲೇ ಮಾಡುವ ದುಆ ಸ್ವೀಕೃತವಾಗುತ್ತದೆ. ಆಗ ಯಾವ ದುಆ ಮಾಡಬೇಕೆಂದು ಯಾರೋ ಹ. ಇಮಾಮ್ ಅಬೂ ಹನೀಫಾರೊಡನೆ(ರ) ಕೇಳಿದಾಗ ಅವರು, 'ಮುಂದೆ ನಿಮ್ಮ ಎಲ್ಲ ದುಆಗಳು ಸ್ವೀಕೃತವಾಗುವಂತಾಗಲು ದುಆ ಮಾಡಿರಿ' ಎಂದರು.

ಆ ವಿಶಿಷ್ಟ ಸ್ಥಳಗಳನ್ನು ಕೆಳಗೆ ಕೊಡಲಾಗಿದೆ.

ಮತಾಫ್: ಇದು ಕಅಬಾದ ಸುತ್ತಲೂ ತವಾಫ್ ಮಾಡುವ ವೃತ್ತಾಕಾರದ ಅಂಗಣ.

ಮುಲ್ತಝಿಮ್: ಇದು ಕಅಬಾದ ಬಾಗಿಲು ಮತ್ತು ಹಜರುಲ್ ಅಸ್ವದ್‌ಗಳ ನಡುವೆ ಇರುವ ಕಅಬಾದ ಗೋಡೆ.

ಮೀಝಾಬ್ ರಹ್ಮತ್: ಇದು ಕಅಬಾದ ಮೇಲೆ ಬೀಳುವ ನೀರು ಹರಿದು ಬೀಳುವ ಸ್ಥಳ.

ಹತೀಮ್: ಇದು ಕಅಬಾದ ಪಕ್ಕದಲ್ಲಿ ಅರ್ಧವೃತ್ತಾಕಾರವಾಗಿ ಕಟ್ಟಿರುವ ಗೋಡೆಯ ಒಳಗಿನ ಭಾಗ.

ಈ ಸ್ಥಳಗಳಲ್ಲದೆ ಕಅಬಾದ ಒಳಗೆ, ಝಮ್ ಝಮ್‌ಬಾವಿಯ ಬಳಿ, ಮಕಾಮು ಇಬ್‌ರಾಹೀಮ್‌ನ ಹಿಂದೆ, ಸಫಾದಲ್ಲಿ, ಮರ್ವಾದಲ್ಲಿ, ಮಸ್‌ಆ(ಸಈ ಮಾಡುವ ಸ್ಥಳ)ದಲ್ಲಿ, ಮುಖ್ಯವಾಗಿ 'ಮೈಲೈನ್ ಅಖ್‌ದರೈನ್'(ಹಸಿರು ಸ್ತಂಭಗಳ)ನ ನಡುವೆ, ಅರಫಾತ್‌ನಲ್ಲಿ, ಮುಝ್ದಲಿಫಾದಲ್ಲಿ, ಮಿನಾದಲ್ಲಿ, ಪ್ರಥಮ ಮತ್ತು ದ್ವಿತೀಯ ಜಮರಾತ್‌ಗಳ ಹತ್ತಿರ, ಹಜರುಲ್ ಅಸ್ವದ್ ಮತ್ತು ರುಕ್ನ್ ಯಮಾನಿಗಳ ನಡುವೆ, ಹಜರುಲ್ ಅಸ್ವದ್‌ನ ಬಳಿ, ಬಾಬುಸ್ಸಲಾಮ್(ಶಾಂತಿಯದ್ವಾರ)ನಲ್ಲಿ ಪ್ರವೇಶಿಸುವ ವೇಳೆ ದುಆಗಳು ಸ್ವೀಕೃತವಾಗುತ್ತದೆ.

ಹ. ಇಬ್‌ರಾಹೀಮ್(ಅ) ನಿರ್ಮಿಸಿದ ಕಅಬಾ ಭವನದ ಈಗಿನ ದ್ವಾರದ ವಿರುದ್ಧ ದಿಕ್ಕಿನಲ್ಲಿ ಹಾಗೂ ರುಕ್ನ್ ಯಮಾನಿಯ ಪಕ್ಕದಲ್ಲಿ ಪಶ್ಚಿಮ ಗೋಡೆಯಲ್ಲಿ ಒಂದು ಬಾಗಿಲು ಇತ್ತು. ಹ. ಅಬ್ದುಲ್ಲಾ ಬಿನ್ ಝುಬೈರ್(ರ) ಅದನ್ನು ಇರಿಸಿದ್ದರು. ಆದರೆ ಹಜ್ಜಾಜ್ ಬಿನ್ ಯೂಸೂಫ್‌ರ ಆಡಳಿತ ಕಾಲದಲ್ಲಿ ಅದನ್ನು ಮುಚ್ಚಲಾಗಿತ್ತು. ಈಗಲೂ ಅದು ಮುಚ್ಚಿಕೊಂಡಿದೆ.

# ಹಜ್ಜ್ ನಿರ್ವಹಣೆ

**ದುಲ್**ಹಜ್ಜ್ 7ನೆಯ ದಿನಾಂಕದಂದು ಝುಹರ್ ನಮಾಝ್‌ನ ಬಳಿಕ ಮಸ್ಜಿದುಲ್ ಹರಾಮಿನಲ್ಲಿ ಇಮಾಮರು ಹಜ್ಜ್ ಯಾತ್ರೆಗೆ ಸಂಬಂಧಿಸಿದ ಖುತ್‌ಬಾ (ಉಪನ್ಯಾಸ) ಮಾಡುತ್ತಾರೆ. ಇದರಲ್ಲಿ ಹಜ್ಜ್ ಯಾತ್ರೆಯ ಮಹತ್ವ, ಅದರ ವಿಧಿ ಕರ್ಮಗಳ ಮತ್ತು ಮುಂದಿನ 5 ದಿನಗಳ ಕಾರ್ಯಕ್ರಮಗಳ ಕುರಿತು ಮಾರ್ಗದರ್ಶನ ನೀಡುತ್ತಾರೆ. ಹಜ್ಜ್‌ನ ದಿನಗಳಲ್ಲಿ ಸುನ್ನತ್(ಪ್ರವಾದಿಚರ್ಯೆ) ಆಗಿರುವ ಮೂರು ಖುತ್‌ಬಾಗಳಲ್ಲಿ ಇದು ಮೊದಲನೆಯದು.

ಎರಡನೆಯ ಖುತ್‌ಬಾವನ್ನು ದಿನಾಂಕ 9ರಂದು ಅರಫಾತ್‌ನ ಮಸ್ಜಿದ್ ನಮಿರದಲ್ಲಿ ಝುಹರ್ ಮತ್ತು ಅಸರ್ ನಮಾಝ್ ನಿರ್ವಹಿಸುವುದಕ್ಕೆ ಮುಂಚೆ ಮಾಡಲಾಗುತ್ತದೆ. ಮೂರನೆಯ ಖುತ್‌ಬಾ ದಿನಾಂಕ 11ರಂದು ಝುಹರ್ ನಮಾಝ್‌ನ ಬಳಿಕ ಮಿನಾದ ಮಸ್ಜಿದ್ ಖೈಫ್‌ನಲ್ಲಿ ಮಾಡಲಾಗುತ್ತದೆ. ಈ ಖುತ್‌ಬಾಗಳ ವೇಳೆ ಅಲ್ಲಿ ಹಾಜರಿದ್ದವರು ಅವುಗಳನ್ನು ಆಲಿಸಬೇಕು. ಅರಫಾತ್‌ನ ಖುತ್‌ಬಾದಲ್ಲಿ ಜುಮಾದ ಖುತ್‌ಬಾದಂತೆ ಖತೀಬರು ನಡುವೆ ಒಮ್ಮೆ ಕುಳಿತು ಕೊಳ್ಳುತ್ತಾರೆ. ಆದರೆ ಉಳಿದೆರಡು ಖುತ್‌ಬಾಗಳಲ್ಲಿ ಹಾಗೆ ಮಾಡುವುದಿಲ್ಲ.

## ಪ್ರಥಮ ದಿನ (ದುಲ್‌ಹಜ್ಜ್ 8)

ಇಫ್‌ರಾದ್ ಮತ್ತು ಕಿರಾನ್‌ನ ಹಜ್ಜ್ ಯಾತ್ರಿಕರು ಮೊದಲೇ ಇಹ್ರಾಮಿನಲ್ಲಿರುವರಷ್ಟೆ. ಆದರೆ ತಮತ್ತುಅ್‌ನ ಹಜ್ಜ್ ಯಾತ್ರಿಕರು ಮತ್ತು ಹರಮ್ ನಿವಾಸಿಗಳು ಹಜ್ಜ್ ನಿರ್ವಹಿಸಲು ದುಲ್ ಹಜ್ಜ್ 8ರಂದು ಇಹ್ರಾಮ್ ಕಟ್ಟಿಕೊಳ್ಳಬೇಕು. ಅದಕ್ಕಿಂತ ಮೊದಲು ಕಟ್ಟಿಕೊಂಡರೆ ಅಡ್ಡಿಯಿಲ್ಲ. ಈ ಎರಡೂ ವಿಧದವರು ಸ್ನಾನ ಮಾಡಿ ಇಹ್ರಾಮಿನ ಬಟ್ಟೆಗಳನ್ನುಟ್ಟು ಎರಡು ರಕಅತ್ ನಫಿಲ್ ನಮಾಝ್ ಮಾಡಿದ ನಂತರ ನಿಯ್ಯತ್ ಮಾಡಿ ತಲ್ಬಿಯಾ ಆರಂಭಿಸಬೇಕು. ಅನಂತರ ಮಿನಾಕ್ಕೆ ಹೊರಡಬೇಕು. ಮಿನಾದಲ್ಲಿ ಅಂದಿನ ಝುಹರ್, ಅಸರ್, ಮಗ್ರಿಬ್ ಮತ್ತು ಇಶಾ ನಮಾಝ್‌ಗಳನ್ನು ಮಾಡಿ ರಾತ್ರಿಯನ್ನು ಅಲ್ಲೇ ಕಳೆಯಬೇಕು. ಮರುದಿನ ಮುಂಜಾನೆ ಫಜ್ರ್ ನಮಾಝನ್ನು ಮಿನಾದಲ್ಲೇ ಮಾಡಿ

ಅರಫಾತ್‌ಗೆ ಹೊರಡುವ ಸಿದ್ಧತೆ ಮಾಡಬೇಕು. ಈ ಪ್ರಯಾಣಗಳೆಲ್ಲ ಮುಅಲ್ಲಿಮರ ಬಸ್ಸುಗಳಲ್ಲಿ ನಡೆಯುತ್ತದೆ.

ಹಜ್ಜ್‌ನ ದಿನಗಳಲ್ಲಿ ಶುಕ್ರವಾರ ಬಂದರೆ ಮಿನಾದಲ್ಲಿ ಜುಮಾ ನಮಾಝ್ ಮಾಡಲಾಗುತ್ತದೆ.

## ಎರಡನೆಯ ದಿನ (ದುಲ್‌ಹಜ್ಜ್ 9)

ಇದು ಹಜ್ಜ್‌ನ ಅತಿದೊಡ್ಡ ರುಕ್ನ್(ವಿಧಿ) ನೆರವೇರಿಸುವ ದಿನ. ವಾಸ್ತವದಲ್ಲಿ ಮುಖ್ಯ ಹಜ್ಜ್ ದುಲ್‌ಹಜ್ಜ್ 9ರ ದಿನವೇ ಆಗಿದೆ.

ಸೂರ್ಯೋದಯವಾಗಿ ಬಿಸಿಲು ಹರಡಿದ ಬಳಿಕವೇ ಮಿನಾದಿಂದ ಅರಫಾತ್‌ಗೆ ಹೊರಡಬೇಕು. ಅದಕ್ಕೆ ಮುಂಚೆ ಹೊರಡಲು ಮುಅಲ್ಲಿಮ್ ಮತ್ತು ಅವರ ಏಜಂಟರು ಒತ್ತಾಯಪಡಿಸಿದರೂ ಹೊರಡಬಾರದು. ಹಾಗೆ ಹೊರಟರೆ ಈ ಮುಖ್ಯ ಸುನ್ನತ್ತನ್ನು ಕಳೆದು ಕೊಂಡಂತಾಗುವುದು. ದಾರಿಯುದ್ದಕ್ಕೂ ತಲ್ಬಿಯಾ ಮತ್ತು ದೇವ ಸ್ತುತಿಸ್ತೋತ್ರಗಳನ್ನು ಸಭ್ಯತೆ, ಏಕಾಗ್ರತೆ ಮತ್ತು ಗಾಂಭೀರ್ಯದೊಂದಿಗೆ ಹೇಳುತ್ತ ಸಾಗಬೇಕು. ಹೀಗೆ ಹೋಗುವಾಗ ಪ್ರವಾದಿವರ್ಯರು(ಸ) ಮುಝ್ದಲಿಫಾದಿಂದ 'ದಬ್ಬ್' (ಅಥವಾ ಕನಾತಿರ್) ಮಾರ್ಗವಾಗಿ ಅರಫಾತ್‌ಗೆ ಹೋಗಿದ್ದರು. ಅರಫಾತ್ ಮೈದಾನದಲ್ಲಿರುವ 'ಜಬಲುರ್‍ರಹಃ' ಎಂಬ ಬೆಟ್ಟ ಕಣ್ಣಿಗೆ ಬಿದ್ದೊಡನೆ ದುಆ ಮಾಡಬೇಕು.

ಅರಫಾತ್ ಮೈದಾನವು ಬಹಳ ವಿಶಾಲವಾಗಿದೆ. ಇದು ಮಕ್ಕಾದಿಂದ ಸುಮಾರು 15 ಕಿ.ಮೀ. ದೂರದಲ್ಲಿದೆ. ಇದು ಹರಮಿನಿಂದ ಹೊರಗಿದೆ.

ಸೌದಿ ಸರಕಾರವು ಯಾತ್ರಿಕರ ಅನುಕೂಲತೆಗಾಗಿ ಅರಫಾತ್‌ನ ಗಡಿಗಳನ್ನು ಗುರುತಿಸಿದೆ. ಅರಫಾತ್‌ನ ವುಕೂಫ್ (ತಂಗುವಿಕೆ) ಸರಿಯಾಗದಿದ್ದರೆ ಅರ್ಥಾತ್ ಅಂದು ಸ್ವಲ್ಪ ಹೊತ್ತಿನ ಮಟ್ಟಿಗಾದರೂ ಅರಫಾತ್‌ನಲ್ಲಿ ತಂಗದಿದ್ದರೆ ಹಜ್ಜ್ ಯಾತ್ರೆಯೇ ವ್ಯರ್ಥವಾಗಿ ಬಿಡುವುದು. ಈ ಮೈದಾನವನ್ನು ಪ್ರವೇಶಿಸುವಲ್ಲೇ ಹ. ಇಬ್‌ರಾಹೀಮ್(ಅ) ಸ್ಥಾಪಿಸಿದ ಒಂದು ಮಸೀದಿ ಇದೆ. ಇದರ ಹೆಸರು 'ಮಸ್ಜಿದ್ ನಮಿರ' ಎಂದಾಗಿದ್ದು ಇದು ಅರಫಾತ್‌ನ ಗಡಿಯಲ್ಲೇ ಇದೆ.

ಸಂಪೂರ್ಣ ಅರಫಾತ್ ಮೈದಾನವು ವುಕೂಫ್‌ನ ಸ್ಥಳವಾಗಿದ್ದು ಅದರಲ್ಲಿ ಎಲ್ಲೂ ತಂಗಬಹುದಾದರೂ 'ಜಬಲುರ್‍ರಹ್ಮ'ದ ಹತ್ತಿರ ತಂಗುವುದು ಉತ್ತಮ. ಆದರೆ ಜನರ ಸಂಚಾರಕ್ಕೆ ಆತಂಕವುಂಟಾಗದಂತೆ ನೋಡಿಕೊಳ್ಳಬೇಕು. ಇದು ಕಾರ್ಯತಃ ಅತಿ ಪ್ರಯಾಸಕರ.

ಅರಫಾತ್‌ಗೆ ತಲಪಿ ಊಟೋಪಚಾರಗಳನ್ನು ಮಧ್ಯಾಹ್ನಕ್ಕೆ ಮುಂಚೆಯೇ ಮುಗಿಸಿಕೊಳ್ಳ ಬೇಕು. ಮಧ್ಯಾಹ್ನವಾದೊಡನೆ ವುಝೂ ಮಾಡಬೇಕು. (ಸ್ನಾನ ಮಾಡಿದರೆ ಉತ್ತಮ) ಅನಂತರ ಶಾಂತಚಿತ್ತದಿಂದ ಏಕಾಗ್ರತೆಯೊಂದಿಗೆ ಸರ್ವಲೋಕ ಪಾಲಕ ಪ್ರಭುವಿನ ಕಡೆಗೆ ವಾಲಬೇಕು. ತಲ್ಬಿಯಾ, ದುಆ, ದರೂದ್ (ಸಲಾತ್) ಮತ್ತು ಇಸ್ತಿಗ್‌ಫಾರ್‌ಗಳನ್ನು ಮಾಡುತ್ತಲೇ ಇದ್ದು ಆದಷ್ಟು ಬೇಗನೆ ಮಸ್ಜಿದ್ ನಮಿರಕ್ಕೆ ಹೋಗಲು ಪ್ರಯತ್ನಿಸಬೇಕು.

ಮಸ್ಜಿದ್ ನಮಿರಾದಲ್ಲಿ ಮಧ್ಯಾಹ್ನ ಖುತ್‌ಬಾ (ಉಪನ್ಯಾಸ) ನಡೆಯುತ್ತದೆ. ತರುವಾಯ ಒಂದು ಅದಾನ್ ಮತ್ತು ಎರಡು ಇಕಾಮತ್‌ಗಳೊಂದಿಗೆ ಅಂದಿನ ಝುಹರ್ ಮತ್ತು ಅಸರ್ ನಮಾಝ್‌ಗಳನ್ನು ಕಸ್ರ್ (ಕಡಿತ) ಮತ್ತು ಜಮ್‌ಅ್ ಮಾಡಿ ಒಟ್ಟಿಗೆ ನೆರವೇರಿಸಲಾಗುತ್ತದೆ. ಇದರಲ್ಲಿ ಪ್ರಯಾಣಿಕರೂ ಪ್ರಯಾಣಿಕನಲ್ಲದವರೂ ಮಕ್ಕಾ ನಿವಾಸಿಗಳೂ ಸಮಾನರಾಗಿರುತ್ತಾರೆ.

ಇಮಾಮ್ ಮಿಂಬರ್‌ನ (ವೇದಿಕೆಯ) ಮೇಲೇರಿದಾಗ ಅದಾನ್ ಹೇಳಲಾಗುತ್ತದೆ. ಇಮಾಮ್ ಶುಕ್ರವಾರದ ಖುತ್‌ಬಾಗಳ ಹಾಗೆಯೇ ಖುತ್‌ಬಾ ಮಾಡುತ್ತಾರೆ. ಅದರಲ್ಲಿ ಹಜ್ಜ್‌ನ ಕುರಿತು ವಿವರಣೆಗಳಿರುತ್ತವೆ. ಇಮಾಮ್ ಮಿಂಬರಿನಿಂದ ಇಳಿದೊಡನೆ ಇಕಾಮತ್ ಹೇಳಲಾಗುತ್ತದೆ. ಝುಹರ್ ನಮಾಝ್ ಕಸ್ರ್ ಮಾಡಿ ಸಾಮೂಹಿಕವಾಗಿ ಮಾಡಲಾಗುತ್ತದೆ. ಇದರ ಸಲಾಮ್ ಆದೊಡನೆ ಪುನಃ ಇಕಾಮತ್ ಹೇಳಿ ಅಸರ್ ನಮಾಜನ್ನು ಕಸ್ರ್ ಮಾಡಿ ಸಮಯವಾಗುವುದಕ್ಕೆ ಮುಂಚೆ ಮಾಡಲಾಗುತ್ತದೆ.

ಅರಫಾತ್‌ನಲ್ಲಿ ನಮಾಝ್‌ಗಳಿಗೆ ಮುಂಚಿನ ಖುತ್‌ಬಾ ಸುನ್ನತ್ ಆಗಿರುತ್ತದೆ. ಅದೇನೂ ನಿಬಂಧನೆಯಲ್ಲ. ಆದುದರಿಂದ ಇಮಾಮ್ ಖುತ್‌ಬಾ ಮಾಡದಿದ್ದರೆ ಅಥವಾ ನಡು ಮಧ್ಯಾಹ್ನಕ್ಕೆ ಮುಂಚೆಯೇ ಖುತ್‌ಬಾ ಕೊಟ್ಟರೆ ನಮಾಝ್‌ಗಳಿಗೇನೂ ಬಾಧಕವಿಲ್ಲ.

## ಅರಫಾತ್‌ನಲ್ಲಿ ವುಕೂಫ್ (ನಿಲ್ಲುವಿಕೆ)

ಒಂದು ಕ್ಷಣದ ಮಟ್ಟಿಗಾದರೂ ಅರಫಾತ್‌ನಲ್ಲಿ ವುಕೂಫ್ (ನಿಲ್ಲಬೇಕಾದುದು) ಕಡ್ಡಾಯ. ಇದು ಯಾವ ರೂಪದಲ್ಲೂ ಆಗಬಹುದು. ನಿಯ್ಯತ್ ಇರಲಿ, ಇಲ್ಲದಿರಲಿ, ನಿದ್ರಾವಸ್ಥೆಯಲ್ಲಾಗಲಿ, ಜಾಗೃತಾವಸ್ಥೆಯಲ್ಲಿರಲಿ, ಬೋಧರಹಿತವಾಗಿರಲಿ, ಇಚ್ಛಾಪೂರ್ವಕ ವಿರಲಿ, ಬಲಾತ್ಕಾರವಾಗಿರಲಿ, ನಡೆದುಕೊಂಡಾಗಲಿ, ಓಡಿಕೊಂಡಾಗಲಿ, ವಾಹನದಲ್ಲಾಗಿರಲಿ ಅಥವಾ ವಿಮಾನದಲ್ಲಾಗಿರಲಿ ಆ ದಿನ ಅರಫಾತ್‌ನಲ್ಲಿದ್ದರೆ ವುಕೂಫ್ ಸಿಂಧುವಾಗುತ್ತದೆ.

ಮುಟ್ಟಾಗಿದ್ದರೂ ಬಾಣಂತಿತನದಲ್ಲಿದ್ದರೂ ವೀರ್ಯಸ್ಖಲನದ ಮಾಲಿನ್ಯವಿದ್ದರೂ ಅವುಗಳಿಂದ ಶುದ್ಧವಾಗಿರಬೇಕಾದುದು ವುಕೂಫಿನ ಶರತ್ತಲ್ಲ.

ದುಲ್‌ಹಜ್ಜ್ 9ರಂದು ಮಧ್ಯಾಹ್ನದ ನಂತರದಿಂದ ಸೂರ್ಯಾಸ್ತಮಾನದ ವರೆಗೆ ವುಕೂಫ್ ವಾಜಿಬ್ ಆಗಿದೆ. ಸೂರ್ಯಸ್ತಮಾನಕ್ಕೆ ಮುಂಚೆ ಅರಫಾತ್‌ನಿಂತ ಹೊರಗೆ ಹೋಗಿ ಬಿಟ್ಟರೆ 'ದಮ್' (ಪ್ರಾಣಿಬಲಿ) ಕೊಡಬೇಕಾಗುತ್ತದೆ.

ನಮಾಝ್ ಆದ ಕೂಡಲೇ ಮಸೀದಿಯಿಂದ ಹೊರಟು ವುಕೂಫ್‌ಗೆ ಹೋಗಬೇಕು. ಅದರಲ್ಲಿ ತಡಮಾಡಬಾರದು.

ಸಾಧ್ಯವಿದ್ದಷ್ಟು 'ಜಬಲುರ್ರಹ್ಮ'ದ ಹತ್ತಿರ ಕಿಬ್ಲಾಭಿಮುಖವಾಗಿ ನಿಂತು ದುಆ ಮಾಡುವುದು ಒಳ್ಳೆಯದು. 'ಜಬಲುರ್ರಹ್ಮ'ದ ಮೇಲೇರಬಾರದು. ಇದು ಬಿದ್‌ಅತ್ ಆಗಿದೆ.

ಅರಫಾತ್‌ನಲ್ಲಿ ನಿಂತುಕೊಂಡು ವುಕೂಫ್ ಮಾಡುವುದು ಸಮ್ಮತವಾಗಿದೆ. ಅದು ಶರತ್ತಾಗಲಿ ವಾಜಿಬ್ ಆಗಲಿ ಅಲ್ಲ. ನಿತ್ರಾಣ ಆಯಾಸಗಳಿದ್ದರೆ ಕುಳಿತು ಅಥವಾ ಮಲಗಿ ಕೊಂಡು ಕೂಡ ವುಕೂಫ್ ಮಾಡಬಹುದು.

ವುಕೂಫ್‌ನಲ್ಲಿ ನಿರ್ದಿಷ್ಟ ದುಆಗಳೇನೂ ಇಲ್ಲ. ಇಷ್ಟ ಬಂದದ್ದನ್ನು ಭಕ್ತಿಭಾವದಿಂದ ಮಾಡಬಹುದು. ಕೈಗಳನ್ನು ಹೆಗಲ ಮಟ್ಟದ ವರೆಗೆ ಮೇಲಕ್ಕೆತ್ತಿ ಸ್ತುತಿಸ್ತೋತ್ರ, ದರೂದ್, ದುಆ, ದಿಕ್ರ್, ತಲ್ಬಿಯಾಗಳನ್ನು ಹೇಳುತ್ತಲೇ ಇರಬೇಕು. ಅತಿ ವಿನಯದೊಂದಿಗೆ ಭಯಭಕ್ತಿಗಳಿಂದ ತನಗಾಗಿ, ತನ್ನವರಿಗಾಗಿ ಮತ್ತು ಸಕಲ ಮುಸ್ಲಿಮರಿಗಾಗಿ ಇಹಪರಗಳ ಶ್ರೇಯಸ್ಸಿನ ದುಆ ಮಾಡಬೇಕು. ಇದು ದುಆ ಸ್ವೀಕರಿಸಲ್ಪಡುವ ಪರ್ವಕಾಲ. ಇಂತಹ ಸುಯೋಗ ಯಾವಾಗಲೂ ಸಿಗುವುದಿಲ್ಲ. ಇದನ್ನು ಅನಾಸ್ಥೆಯಿಂದ ಕಳೆದುಕೊಳ್ಳಬಾರದು.

ಕಿಬ್ಲಾಭಿಮುಖವಾಗಿ ಮಗ್ರಿಬ್ ವರೆಗೂ ವುಕೂಫ್ ಮಾಡುವುದು ಉತ್ತಮ. ಮಧ್ಯದಲ್ಲಿ ಕುಳಿತುಕೊಳ್ಳಲೂಬಹುದು. ಕೈಗಳನ್ನೆತ್ತಿ ದಣಿದರೆ, ಕೈಗಳನ್ನು ಕೆಳಗೆ ಬಿಟ್ಟು ಕೂಡಾ ದುಆ ಮಾಡಬಹುದು. ಜನಸಂದಣಿಯಿಂದಾಗಿ ಏಕಾಗ್ರತೆ ಮತ್ತು ತನ್ಮಯತೆಗೆ ತೊಡಕುಂಟಾದರೆ, ಬೇರೆ ಕಡೆಗೆ ಸರಿದು ನಿಲ್ಲಬಹುದು. ದಾರಿ ತಪ್ಪಿ ಹೋಗಬಹುದೆಂಬ ಭಯವಿದ್ದರೆ ತಾನಿರುವ ಡೇರೆಯಲ್ಲೇ ವುಕೂಫ್ ಮಾಡಬಹುದು. ಸ್ತ್ರೀ ಪುರುಷರು ಪರಸ್ಪರ ಬೆರೆತು ನಿಲ್ಲಬಾರದು.

ಸಹಿಸಿಕೊಳ್ಳಲು ಸಾಧ್ಯವಿದ್ದರೆ ಬಿಸಿಲಿನಲ್ಲಿ ನಿಂತು ಸೂರ್ಯಾಸ್ತಮಾನದ ವರೆಗೂ ಅತ್ತು, ಕೂಗಿ ದುಆ ಇಸ್ತಿಗ್‌ಫಾರ್‌ಗಳನ್ನು ಮಾಡುತ್ತಿರಬೇಕು. ಅಸಹನೀಯವಾದರೆ ನೆರಳಿಗೆ ಬರಬಹುದು.

ಅರಫಾತಿನಲ್ಲಿ ವುಕೂಫ್‌ನ ವೇಳೆ-

لَا اِلَهَ اِلاَّ اللهُ وَحْدَهُ لَاشَرِيكَ لَهُ لَهُ الْمُلْكُ وَلَهُ الْحَمْدُ
وَهُوَ عَلَى كُلِّ شَيْءٍ قَدِيرٌ

"ಲಾ ಇಲಾಹ ಇಲ್ಲಲ್ಲಾಹು ವಹ್‌ದಹೂ ಲಾ ಶರೀಕಲಹೂ, ಲಹುಲ್ ಮುಲ್ಕು ವಲಹುಲ್ ಹಮ್ದು ವಹುವ ಅಲಾಕುಲ್ಲಿ ಶೈಇನ್ ಕದೀರ್"

ನೂರು ಸಲ,

ಸೂರಃ ಇಖ್‌ಲಾಸ್ (ಕುಲ್‌ಹುವಲ್ಲಾಹು ಅಹದ್...) ನೂರು ಸಲ ಮತ್ತು ನಮಾಝ್‌ನಲ್ಲಿ ಓದುವ ದರೂದ್ ಇಬ್‌ರಾಹೀಮ್ ನೂರು ಸಲ ಓದಿದರೆ, ಅಲ್ಲಾಹನು ದೇವಚರರೊಡನೆ- "ನನ್ನ ಸ್ತುತಿ ಸ್ತೋತ್ರಗೈದ ಹಾಗೂ ನನ್ನ ಪ್ರವಾದಿಗೆ ಸಲಾತ್ ಹೇಳಿದ ನನ್ನ ದಾಸನಿಗೆ ಪ್ರತಿಫಲವೇನೆಂದು ಗೊತ್ತೇ? ಅವನನ್ನು ನಾನು ಕ್ಷಮಿಸಿಬಿಟ್ಟೆ. ಅವನು ತನಗಾಗಿ ಮತ್ತು ಮೌಕಿಫ್‌ನವರಿಗಾಗಿ ಶಿಫಾರಸು ಮಾಡಿದರೆ ನಾನು ಸ್ವೀಕರಿಸುವೆನು" ಎಂದು ಹೇಳುವನೆಂದು ಒಂದು ಹದೀಸ್‌ನಲ್ಲಿದೆ.

ದುಲ್‌ಹಜ್ಜ್ 9ರ ದಿನಾಂಕವು ಶುಕ್ರವಾರ ಬಂದು ಬಿಟ್ಟರೆ ಅಂದಿನ ವುಕೂಫ್‌ಗೆ ಇತರ ದಿನಗಳಿಗಿಂತ ಎಪ್ಪತ್ತು ಪಟ್ಟು ಹೆಚ್ಚು ಮಹತ್ವವಿದೆ. ಬಹುಶಃ ಇದೇ ಕಾರಣಕ್ಕಾಗಿ

ಜನಸಾಮಾನ್ಯರು ಶುಕ್ರವಾರದ ಹಜ್ಜನ್ನು ಹಜ್ಜುಲ್ ಅಕ್ಬರ್ ಎನ್ನುತ್ತಿರಬಹುದು. ವಾಸ್ತವದಲ್ಲಿ 'ಉಮ್ರಾ'ವನ್ನು ಹಜ್ಜುಲ್ ಅಸ್ಗರ್ ಎನ್ನುವುದರಿಂದ ಈ ಹಜ್ಜನ್ನು 'ಹಜ್ಜುಲ್ ಅಕ್ಬರ್' ಎನ್ನಲಾಗುತ್ತದೆ ಅಷ್ಟೇ.

ಅಂದು ಸೂರ್ಯಾಸ್ತಮಾನವಾದ ಕೂಡಲೇ ಇಡೀ ಜನಸ್ತೋಮವು ಮುಝ್ದಲಿಫಾದಲ್ಲಿ ರಾತ್ರಿ ವುಕೂಫ್ ಮಾಡಲಿಕ್ಕಾಗಿ ಹೋಗುತ್ತದೆ.

## ಮೂರನೆಯ ದಿನ (ದುಲ್‌ಹಜ್ಜ್ 10)

9ನೆಯ ದಿನಾಂಕದ ಸೂರ್ಯಸ್ತಮಾನವಾದೊಡನೆ 10ನೆಯ ದಿನಾಂಕದ ರಾತ್ರಿ ಆರಂಭವಾಗುತ್ತದಷ್ಟೆ. ಸೂರ್ಯಾಸ್ತಮಾನವಾದೊಡನೆ ಮಗ್ರಿಬ್ ನಮಾಝ್ ಮಾಡದೆ ಆದಷ್ಟು ಬೇಗನೆ ಅರಫಾತ್‌ನಿಂದ ಮುಝ್ದಲಿಫಾಕ್ಕೆ ಹೊರಡಬೇಕು. ತಡ ಮಾಡುವುದು ಮಕ್ರೂಹ್ ಆಗಿದೆ. ಇಮಾಮ್‌ರಿಗಿಂತ ಮುಂಚೆ ಹೋಗದಿರುವುದು ಉತ್ತಮ. ಇಮಾಮ್ ತಡ ಮಾಡಿದರೆ ಅವರನ್ನು ಕಾಯುವುದೂ ಸರಿಯಲ್ಲ.

ಅರಫಾತ್‌ನಿಂದ ಮುಝ್ದಲಿಫಾಕ್ಕೆ ಸುಮಾರು 5 ಕಿ.ಮೀ ದೂರವಿದೆ. ದಾರಿಯುದ್ದಕ್ಕೂ ತಲ್ಬಿಯಾ, ದುಆ, ಇಸ್ತಿಗ್‌ಫಾರ್, ತಕ್ಬೀರ್ ಮತ್ತು ದರೂದ್‌ಗಳನ್ನು ಹೆಚ್ಚು ಹೆಚ್ಚಾಗಿ ಹೇಳುತ್ತಿರಬೇಕು. ಅರಫಾತ್‌ನಲ್ಲಾಗಲಿ, ದಾರಿಯಲ್ಲಾಗಲಿ ಮಗ್ರಿಬ್ ಅಥವಾ ಇಶಾ ನಮಾಝ್ ಮಾಡಬಾರದು. ಮಾಡಿಬಿಟ್ಟರೆ ಪುನಃ ಮಾಡಬೇಕಾದೀತು. ಈ ಎರಡೂ ನಮಾಝ್‌ಗಳನ್ನು ಮುಝ್ದಲಿಫಾಕ್ಕೆ ತಲಪಿದ ಬಳಿಕವೇ ಒಂದು ಅದಾನ್ ಮತ್ತು ಒಂದು ತಕ್ಬೀರ್‌ನೊಂದಿಗೆ ಮಾಡಲಾಗುವುದು.

ಮುಝ್ದಲಿಫಾಕ್ಕೆ ತಲುಪಿದಾಗ ಇಶಾ ನಮಾಝ್‌ನ ಸಮಯವಾಗಿದ್ದರೆ ಕೂಡಲೇ ನಮಾಝ್ ಮಾಡಬೇಕು. ಇಶಾ ನಮಾಝ್‌ನ ಸಮಯವಾಗದಿದ್ದರೆ ಅಲ್ಲಿಯ ವರೆಗೆ ಕಾಯಬೇಕು. ಮುಝ್ದಲಿಫಾದಲ್ಲಿ ಎರಡೂ ನಮಾಝ್‌ಗಳನ್ನು ಏಕಕಾಲದಲ್ಲಿ ಮಾಡಲು ಜಮಾಅತ್‌ನ ನಿಬಂಧನೆಯಿಲ್ಲ. ಒಬ್ಬನೇ ಮಾಡುವಾಗಲೂ ನಮಾಝ್‌ಗಳನ್ನು ಒಟ್ಟಾಗಿಯೇ (ಮಗ್ರಿಬ್ ಮುಗಿಸಿದ ಕೂಡಲೇ ಇಶಾ) ಮಾಡಬೇಕು. ಇಶಾ ನಮಾಝ್‌ನ ಸಮಯವಾದೊಡನೆ ಅದಾನ್ ಹೇಳಬೇಕು. ತಕ್ಬೀರ್ ಹೇಳಿ ಮಗ್ರಿಬ್ ನಮಾಝ್ ಮಾಡಬೇಕು. ಮಗ್ರಿಬ್ ನಮಾಝ್‌ನ ಬಳಿಕ ಸುನ್ನತ್ ಮತ್ತು ನಫಿಲ್ ನಮಾಝ್‌ಗಳನ್ನು ಮಾಡಬಾರದು. ಮಗ್ರಿಬ್ ನಮಾಝ್‌ನ ಸಲಾಮ್ ಆದ ಕೂಡಲೇ ಪುನಃ ಇಕಾಮತ್ ಹೇಳದೆ ಇಶಾ ನಮಾಝನ್ನೂ ಕಸ್ರ್ ಮಾಡಿ ನಿರ್ವಹಿಸಬೇಕು. ಸುನ್ನತ್ ಮತ್ತು ನಫಿಲ್‌ಗಳನ್ನು ಇಶಾ ನಮಾಝ್‌ನ ಬಳಿಕ ಮಾಡಬೇಕು. ನಡುವೆ ಹೆಚ್ಚು ಸಮಯ ಕಳೆದರೆ ಇಷಾ ನಮಾಝ್‌ಗೂ ಇಕಾಮತ್ ಹೇಳಬೇಕು. ಮುಝ್ದಲಿಫಾದಲ್ಲಿ ಎರಡು ನಮಾಝ್‌ಗಳನ್ನು ಸೇರಿಸುವುದು ವಾಜಿಬ್ ಆಗಿದೆ.

ಮಗ್ರಿಬ್, ಇಶಾ ನಮಾಝ್‌ಗಳ ನಂತರ ರಾತ್ರಿಯನ್ನು ಮುಝ್ದಲಿಫಾದಲ್ಲೇ ಕಳೆಯಬೇಕು. ಮುಝ್ದಲಿಫಾದಲ್ಲಿ ವುಕೂಫ್ ಮಾಡಬೇಕಾದ ವಾಜಿಬ್ ಸಮಯವು

ಸುಬ್‌ಹ್ ಸಾದಿಕ್(ಬೆಳ್ಳಿ ಮೂಡುವುದಕ್ಕಿಂತ ಮುಂಚೆ)ನಿಂದ ಸೂರ್ಯೋದಯದ ವರೆಗೆ ಆಗಿದೆ. ಈ ಅವಧಿಯಲ್ಲಿ ಒಂದು ಕ್ಷಣದ ಮಟ್ಟಿಗಾದರೂ ಮಲಗಿ, ಜಾಗರಣೆಯಲ್ಲಿ, ಸ್ಮೃತಿ ಇಲ್ಲದೆ ಅಥವಾ ಇನ್ನಾವುದೇ ಅವಸ್ಥೆಯಲ್ಲಿ ಕಳೆದರೂ ವುಕೂಫ್ ಆಗುತ್ತದೆ. ಮುಝ್ದಲಿಫಾದಲ್ಲಿದ್ದೇನೆಂಬ ಅರಿವು ಇದ್ದರೂ, ಇಲ್ಲದಿದ್ದರೂ ಸರಿ. ಸುಬ್‌ಹ್ ಸಾದಿಕ್‌ಗೆ ಮುಂಚೆ ಮುಝ್ದಲಿಫಾ ಬಿಟ್ಟು ಹೋಗಿಬಿಟ್ಟರೆ 'ದಮ್' (ಪ್ರಾಣಿಬಲಿ) ಕೊಡಬೇಕಾದೀತು.

ರೋಗಿಗಳು, ದುರ್ಬಲರು ಅಥವಾ ನೂಕು ನುಗ್ಗಲಿನ ಭಯದಿಂದ ಸ್ತ್ರೀಯರು ಮುಝ್ದಲಿಫಾದಲ್ಲಿ ವುಕೂಫ್ ಮಾಡದೆ ಹೋಗುವುದರಲ್ಲಿ ಅಡ್ಡಿಯಿಲ್ಲ. ಆದರೆ ಕಲ್ಲೆಸೆತವನ್ನು ಸೂರ್ಯೋದಯದ ಬಳಿಕವೇ ಮಾಡಬೇಕು.

ಮುಝ್ದಲಿಫಾದ ಇಡೀ ಕಣಿವೆಯು ವುಕೂಫ್‌ನ ಸ್ಥಳವಾಗಿರುವುದರಿಂದ ಅದರಲ್ಲಿ ಎಲ್ಲೂ ವುಕೂಫ್ ಮಾಡಬಹುದು. ಇಲ್ಲೂ ವುಕೂಫ್ ಸಮಯದಲ್ಲಿ ತಲ್ಬಿಯಾ, ತಕ್ಬೀರ್, ತಹ್ಲೀಲ್, ದರೂದ್, ಇಸ್ತಿಗ್‌ಫಾರ್ ಇತ್ಯಾದಿಗಳನ್ನು ಮಾಡುತ್ತಿರಬೇಕು. ದುಆಗಳನ್ನೂ ಆದಷ್ಟು ಹೆಚ್ಚು ಮಾಡಬೇಕು.

ಮುಝ್ದಲಿಫಾ ಮತ್ತು ಮಿನಾಗಳ ನಡುವೆ ಸುಮಾರು 490 ಮೀಟರ್‌ಗಳಷ್ಟು ಭಾಗವನ್ನು ಮಹಸ್ಸರ್ ಕಣಿವೆ ಎನ್ನುತ್ತಾರೆ. ಇಲ್ಲೇ 'ಅಸ್ಹಾಬುಲ್ ಫೀಲ್' (ಆನೆಯ ಸೇನೆ) ನಾಶ ಹೊಂದಿದ್ದರು. ಈ ಕಣಿವೆಯನ್ನು ಬೇಗಬೇಗನೆ ದಾಟಬೇಕು. ಇದನ್ನು ಅಗ್ನಿ ಕಣಿವೆ ಎಂದು ಕರೆಯಲಾಗುತ್ತದೆ. ಇಲ್ಲಿಂದ ಕಲ್ಲುಗಳನ್ನು ಹೆಕ್ಕಬಾರದು. ಈ ಸ್ಥಳವನ್ನು ಫಲಕಗಳ ಮೂಲಕ ಗುರುತಿಸಲಾಗಿದೆ. ಈಗ ಬಸ್ಸುಗಳ ಆಧಿಕ್ಯದಿಂದ ಇದರಂತೆ ವರ್ತಿಸಲು ಸಾಧ್ಯವಾಗುವುದಿಲ್ಲ.

ಮುಝ್ದಲಿಫಾದಿಂದ ಮುಂಜಾನೆ ಹೊರಡುವುದಕ್ಕೆ ಮುಂಚೆ ಸುಮಾರು ಕಡಲೆ ಕಾಳಿನಷ್ಟು ಗಾತ್ರದ 7 ಸಾಧ್ಯವಿದ್ದರೆ 70 ಹರಳು ಕಲ್ಲುಗಳನ್ನು ಹೆಕ್ಕಿಕೊಳ್ಳಬೇಕು. ಅಲ್ಲಿ ಸಾಧ್ಯವಾಗದಿದ್ದರೆ ಬೇರೆ ಕಡೆಗಳಿಂದಲೂ ಹೆಕ್ಕಿಕೊಳ್ಳುವುದರಲ್ಲಿ ಅಭ್ಯಂತರವಿಲ್ಲ. ಆದರೆ ಜಮರಾತ್‌ಗಳ ಜಾಗದಿಂದ ಹೆಕ್ಕಬಾರದು.

## ಹೊಡೆಯಲು ಬೇಕಾದ ಹರಳು ಕಲ್ಲುಗಳ ವಿವರ ಹೀಗಿದೆ.

ದುಲ್‌ಹಜ್ಜ್ 10 ರಂದು ಜಮರ ಅಕಬ(ದೊಡ್ಡ ಶೈತಾನ)ಕ್ಕೆ ಹೊಡೆಯಲು 7

ದುಲ್‌ಹಜ್ಜ್ 11 ಪ್ರಥಮ ಜಮರಕ್ಕೆ 7, ದ್ವಿತೀಯ ಜಮರಕ್ಕೆ 7, ಜಮರ ಅಕಬಕ್ಕೆ 7

ದುಲ್‌ಹಜ್ಜ್ 12 ಪ್ರಥಮ ಜಮರಕ್ಕೆ 7, ದ್ವಿತೀಯ ಜಮರಕ್ಕೆ 7, ಜಮರ ಅಕಬಕ್ಕೆ 7

ದುಲ್‌ಹಜ್ಜ್ 13 ಪ್ರಥಮ ಜಮರಕ್ಕೆ 7, ದ್ವಿತೀಯ ಜಮರಕ್ಕೆ 7, ಜಮರ ಅಕಬಕ್ಕೆ 7

ಹೀಗೆ ಒಟ್ಟು 70 ಹರಳು ಕಲ್ಲುಗಳಾಗುತ್ತವೆ.

## ಜಮರ ಅಕಬಕ್ಕೆ (ದೊಡ್ಡ ಶೈತಾನನಿಗೆ) ಕಲ್ಲೆಸೆಯುವುದು

ದುಲ್‌ಹಜ್ಜ್ ಹತ್ತರಂದು ಫಜ್ರ್ ನಮಾಝ್ ಮುಗಿಸಿ ಮುಝ್ದಲಿಫಾದಿಂದ ಹೊರಟು ಮಿನಾಕ್ಕೆ ಮರುಳುತ್ತಾರಷ್ಟೆ. ಅಲ್ಲಿ ಸಾಮಾನುಗಳನ್ನೆಲ್ಲ ತಮ್ಮ ತಮ್ಮ ಡೇರೆಯೊಳಗೆ ಇಟ್ಟು ಜಮರ ಅಕಬಕ್ಕೆ ಕಲ್ಲೆಸೆಯಲು ಹೋಗಬೇಕು.

ದುಲ್‌ಹಜ್ಜ್ 10ರಂದೇ ಜಮರ ಅಕಬಕ್ಕೆ ಕಲ್ಲೆಸೆಯುವುದು ವಾಜಿಬ್ ಆಗಿದೆ. ಇತರ ಜಮರಾತ್‌ಗಳಿಗೆ ಅಂದು ಕಲ್ಲೆಸೆಯುವುದು ಬಿದ್‌ಅತ್ ಮತ್ತು ಅಜ್ಞಾನ. ಇದರ ಸುನ್ನತ್ ಸಮಯವು ಸೂರ್ಯೋದಯದ ನಂತರ ಮಧ್ಯಾಹ್ನ ಮುಗಿಯುವ ವರೆಗೆ ಆಗಿದೆ. ಸೂರ್ಯಾಸ್ತಮಾನದ ವರೆಗೂ ಕಲ್ಲೆಸೆಯಬಹುದು. ಅನಂತರ ಮಕ್ರೂಹ್ ಆಗಿದೆ. ಆದರೆ ದುರ್ಬಲರು, ವೃದ್ಧರು, ಆರೋಗ್ಯ ಕೆಟ್ಟುಹೋದ ಪುರುಷರು ಮತ್ತು ಸ್ತ್ರೀಯರಿಗೆ ಮಕ್ರೂಹ್ ಸಹ ಅಲ್ಲ. ಒಟ್ಟಿನಲ್ಲಿ ಅದಕ್ಕೆ ಸುಬ್‌ಹ್ ಸಾದಿಕ್ ವರೆಗೂ ಸಮಯಾವಕಾಶವಿದೆ. ಈಗೀಗ ಹೆಚ್ಚುತ್ತಿರುವ ಜನಸಂದಣಿಯಿಂದಾಗಿ ಅದರ ಸಂಪೂರ್ಣ ಪ್ರಯೋಜನ ಪಡೆಯುವುದರಲ್ಲಿ ತಪ್ಪಿಲ್ಲ.

ಜಮರ ಅಕಬ ಎಂಬುದು ಮಿನಾದ ಕಡೆಯ ಕೊನೆಯ ಜಮರ. ಇದಕ್ಕಿಂತ ಕನಿಷ್ಠಪಕ್ಷ 5 ಮೊಳ ಅಥವಾ ಅದಕ್ಕಿಂತಲೂ ದೂರದಲ್ಲಿ ಮಕ್ಕಾ ನಗರವು ಎಡಕ್ಕೆ ಮತ್ತು ಮಿನಾ ಬಲಕ್ಕೆ ಇರುವಂತೆ ನಿಂತು 7 ಕಲ್ಲುಗಳನ್ನು ಒಂದೊಂದರಂತೆ ಹೊಡೆಯಬೇಕು. ಪ್ರತಿಯೊಂದು ಕಲ್ಲನ್ನು ಎಸೆಯುವಾಗ ತಕ್ಬೀರ್ ಹೇಳಬೇಕು. ಅದರೊಂದಿಗೆ 'ಸುಬ್‌ಹಾನಲ್ಲಾಹ್, ಲಾ ಇಲಾಹ ಇಲ್ಲಲ್ಲಾಹ್' ಎಂದೂ ಹೇಳಬಹುದು. ಮೌನವಾಗಿರುವುದು ಮಕ್ರೂಹ್ ಆಗಿದೆ.

ಕಲ್ಲನ್ನು ಹೆಬ್ಬೆರಳು ಮತ್ತು ತೋರ್ಬೆರಳುಗಳಿಂದ ಹಿಡಿದು ಹೊಡೆಯಬೇಕು. ಬೇರೆ ವಿಧಾನದಿಂದ ಹೊಡೆದರೂ ಆಗಬಹುದು. ಕಲ್ಲನ್ನು ಬಲಗೈಯಿಂದ ಎಸೆಯುವುದು ಮುಸ್ತಹಬ್ ಆಗಿದೆ. ಕಂಕುಳು ಕಾಣುವ ವರೆಗೂ ಎತ್ತಿ ಹೊಡೆಯಬೇಕು. ಏಳೂ ಕಲ್ಲುಗಳನ್ನು ಒಮ್ಮೆಲೆ ಹೊಡೆಯಬಾರದು. ಹಾಗೆ ಹೊಡೆದರೆ ಅದು ಒಂದೇ ಎಂದು ಪರಿಗಣಿಸಲ್ಪಡುವುದು. ಅನಂತರ ಆರು ಕಲ್ಲುಗಳನ್ನು ಹೊಡೆಯಲೇಬೇಕಾದೀತು. ಜಮರ ಅಕಬಕ್ಕೆ ಕಲ್ಲೆಸೆದ ಬಳಿಕ ಅಲ್ಲಿ ನಿಲ್ಲಬಾರದು. ಕೂಡಲೇ ಅಲ್ಲಿಂದ ತಮ್ಮ ಸ್ಥಾನಕ್ಕೆ ತೆರಳಬೇಕು. ಜಮರ ಅಕಬದ ರಮಿೊ (ಕಲ್ಲೆಸೆತ) ಆರಂಭಿಸಿದೊಡನೆ ತಲ್ಬಿಯಾ ನಿಲ್ಲಿಸಬೇಕು. ಮುಂದುವರಿಸಬಾರದು.

ಪುರುಷರು, ಸ್ತ್ರೀಯರು, ರೋಗಿಗಳು, ಆರೋಗ್ಯವಂತರು ಮತ್ತು ವೃದ್ಧರು ಬಿಡುವಿಲ್ಲದೆ ಎಲ್ಲರೂ ತಮ್ಮ ಸ್ವಂತ ಕೈಯಿಂದಲೇ ಕಲ್ಲೆಸೆಯಬೇಕು. ಧರ್ಮ ಶಾಸ್ತ್ರೋಕ್ತ ಕಾರಣ ಇರುವವರು ತಮ್ಮ ಕಡೆಯಿಂದ ಪ್ರತಿನಿಧಿಯನ್ನು ಕಳುಹಿಸಬಹುದು. ಧರ್ಮ ಶಾಸ್ತ್ರೋಕ್ತ ಕಾರಣ ಎಂದರೆ ನಮಾಝನ್ನು ಕುಳಿತು ಮಾಡಬೇಕಾದಂತಹ ನಿತ್ರಾಣ ಇರುವವರು ಅಥವಾ ಜಮರಾತ್ ವರೆಗೆ ಸವಾರಿಯಲ್ಲಿ ಹೋದರೆ ರೋಗ

ಉಲ್ಬಣವಾಗಬಹುದೆಂಬ ಭೀತಿಯಿರುವವರು, ನಡೆಯಲಾಗದವರು ಹಾಗೂ ಸವಾರಿ ಸಿಗದವನು.

ಪ್ರತಿನಿಧಿಯು ಮೊದಲು ತನ್ನ ಕಡೆಯಿಂದ ಕಲ್ಲೆಸೆತವನ್ನು ಮುಗಿಸಿಕೊಂಡವನಾಗಿರಬೇಕು. ಪ್ರತಿನಿಧಿಗೆ ಕಾರಣ ಇರುವವನ ಅಪ್ಪಣೆ ಅಗತ್ಯ. ಅವನು ಪ್ರತಿನಿಧಿಯಾಗಿ ನೇಮಿಸಲ್ಪಡದೆ ತನ್ನಿಚ್ಛೆಯಿಂದ ಹೊಡೆದರೆ ಅದು ಸಿಂಧುವಲ್ಲ. ಆದರೆ ಪ್ರಜ್ಞಾಹೀನರ, ಸಣ್ಣ ಮಕ್ಕಳ ಮತ್ತು ಮಾನಸಿಕ ರೋಗಿಗಳ ಕಡೆಯಿಂದ ಅವರ ಪ್ರತಿನಿಧಿಗಳು ಅನುಮತಿ ಇಲ್ಲದೆ ಎಸೆಯಬಹುದು.

ಕಲ್ಲುಗಳು ಜಮರಕ್ಕೆ ತಾಗದೆ ಅದರ ಬುಡದಲ್ಲಿ ಕಟ್ಟಲಾಗಿರುವ ಕಟ್ಟೆಯಲ್ಲಿ ಬಿದ್ದರೂ ಸಾಕು. ಕಟ್ಟೆಯಿಂದ ಹೊರಕ್ಕೆ ಬಿದ್ದ ಕಲ್ಲು ಲೆಕ್ಕಕ್ಕಿಲ್ಲ. ಜಮರದ ಸ್ತಂಭ ಮುಖ್ಯವಲ್ಲ. ಅದರ ಕೆಳಗಿನ ನೆಲವೇ ಮುಖ್ಯ. ದೊಡ್ಡಕಲ್ಲುಗಳಿಂದ ಹೊಡೆಯುವುದು ತಪ್ಪು, ಪಾದರಕ್ಷೆ ಅಥವಾ ಕೈಗೆ ಸಿಕ್ಕಿದ ವಸ್ತುಗಳನ್ನು ಎಸೆಯುವುದು ಮೂರ್ಖತನವಾಗಿದೆ. ಇದರಿಂದ ರಮೀ ಆಗುವುದಿಲ್ಲ.

## ಪ್ರಾಣಿ ಬಲಿ

ಜಮರ ಅಕಬದ ಕಲ್ಲೆಸೆತ ಮುಗಿದೊಡನೆ ಕಾರಿನ್ ಮತ್ತು ಮುತಮತ್ತಅ್ ಹಾಜಿಗಳು ಪ್ರಥಮವಾಗಿ ಪ್ರಾಣಿ ಬಲಿಕೊಡಬೇಕಾದುದು ವಾಜಿಬ್ ಆಗಿದೆ. ಮುಫ್ರಿದರಿಗೆ ಇದು ವಾಜಿಬ್ ಅಲ್ಲ. ಕೊಡುವುದರಲ್ಲಿ ಅಡ್ಡಿಯೂ ಇಲ್ಲ.

ಕಾರಿನ್ ಮತ್ತು ಮುತಮತ್ತಅ್ ಹಾಜಿಗಳು ಪ್ರಾಣಿ ಬಲಿಗಿಂತ ಮುಂಚೆ ಕ್ಷೌರಮಾಡಿದರೆ 'ದಮ್' (ಆ ಬಗ್ಗೆ ಪ್ರಾಣಬಲಿ ಪ್ರತ್ಯೇಕ) ಕೊಡಬೇಕಾದೀತು. ಕಲ್ಲೆಸೆತ, ಪ್ರಾಣಿಬಲಿ ಮತ್ತು ಕ್ಷೌರ ಅನುಕ್ರಮವಾಗಿರಬೇಕಾದುದು ಕಡ್ಡಾಯ.

ಪ್ರಾಣಿಯನ್ನು ತಮ್ಮ ಕೈಯಿಂದಲೇ ದಬ್‌ಹ್ ಮಾಡುವುದು ಉತ್ತಮ. ಬಲಿಯರ್ಪಿಸುವ ಪ್ರಾಣಿ, ಅದರ ಮಾಂಸ ವಿತರಣೆ ಇತ್ಯಾದಿಗಳು ಈದುಲ್ ಅಝ್‌ಹಾದ ಬಲಿದಾನದ ಕ್ರಮದ ಪ್ರಕಾರವೇ ಇದೆ. ಬಲಿ ಮಾಡಿದ ಪ್ರಾಣಿಯ ಮಾಂಸವನ್ನು ಬೇಯಿಸಿ ಸ್ವತಃ ತಿನ್ನುವುದು ಉತ್ತಮ.

ಪ್ರಾಣಿಬಲಿ ಕೊಡಲು ಆರ್ಥಿಕ ಬಲವಿಲ್ಲದವರು (ಮುತಮತ್ತಅ್ ಮತ್ತು ಕಾರಿನ್) ಹಜ್ಜ್ ದಿನಗಳಲ್ಲಿ ಮೂರು ಮತ್ತು ಮನೆಯನ್ನು ತಲುಪಿದ ಬಳಿಕ ಏಳು- ಹೀಗೆ 10 ದಿನಗಳ ಉಪವಾಸ ವ್ರತವನ್ನು ಪರಿಹಾರ ರೂಪದಲ್ಲಿ ಆಚರಿಸಬೇಕು.

## ಹಲ್ಕ್ ಅಥವಾ ಕಸ್ರ್ (ಕ್ಷೌರ ಅಥವಾ ಕೂದಲು ಕತ್ತರಿಸುವುದು)

ಪ್ರಾಣಿ ಬಲಿಯ ನಂತರ ಕ್ಷೌರ ಮಾಡಬೇಕು ಅಥವಾ ತಲೆ ಕೂದಲನ್ನು ಕತ್ತರಿಸಬೇಕು. ಬೋಳಿಸುವುದು ಕತ್ತರಿಸುವುದಕ್ಕಿಂತ ಉತ್ತಮ. ಕಾಲಂಶ ತಲೆಕೂದಲನ್ನಾದರೂ ಕತ್ತರಿಸದಿದ್ದರೆ ಇಹ್ರಾಮ್ ಬಿಚ್ಚುವಂತಿಲ್ಲ. ಅಷ್ಟನ್ನು ಮಾತ್ರ ಕತ್ತರಿಸುವುದೂ ಸರಿಯಲ್ಲ. ತಲೆ ಕೂದಲು

ಬೆರಳಿನ ಗಂಟಿನಷ್ಟಕ್ಕಿಂತ ಗಿಡ್ಡವಾಗಿದ್ದರೆ ಬೋಳಿಸಲೇಬೇಕು. ಉಗುರು ಇತ್ಯಾದಿಗಳನ್ನು ತಲೆ ಬೋಳಿಸಿದ ನಂತರವೇ ತೆಗೆಯಬೇಕು.

ಸ್ತ್ರೀಯರು ತಲೆ ಬೋಳಿಸುವುದು ಹರಾಮ್ ಆಗಿದೆ. ಅವರು ತಮ್ಮ ಕೂದಲನ್ನು ಒಟ್ಟು ಸೇರಿಸಿ ಅದರ ತುದಿಯನ್ನು ಸುಮಾರು ಒಂದು ಅಂಗುಲದಷ್ಟು ಕತ್ತರಿಸಿ ಬಿಟ್ಟರೆ ಸಾಕು. ಅವರು ತಮ್ಮ ತಲೆ ಕೂದಲನ್ನು ತಮ್ಮೊಂದಿಗೆ ಶಾಶ್ವತವಾಗಿ ವಿವಾಹ ನಿಷಿದ್ಧದ ಸಂಬಂಧಿಕರಾದ ಪುರುಷರಿಂದ ಅಥವಾ ಬೇರೆ ಸ್ತ್ರೀಯರಿಂದ ಕತ್ತರಿಸಿಕೊಳ್ಳಬೇಕು, ಇಲ್ಲವೆ ತಾವೇ ಕತ್ತರಿಸಬೇಕು. ಪರ ಪುರುಷರಿಂದ ಕತ್ತರಿಸಿಕೊಳ್ಳಬಾರದು.

ಕ್ಷೌರದ ಸಮಯವು ದುಲ್‌ಹಜ್ಜ್ 10ರ ಸುಬ್‌ಹ್ ಸಾದಿಕ್‌ನಿಂದ 12ನೆಯ ದಿನಾಂಕದ ವರೆಗೆ ಇರುತ್ತದೆ. ಇದಕ್ಕೆ ಹಗಲು ರಾತ್ರಿ ಎಂಬ ಭೇದವೇನೂ ಇಲ್ಲ. ಅದು ಹರಮಿನಲ್ಲೇ ಆಗಿರಬೇಕು. ಹರಮಿನಿಂದ ಹೊರಗೆ ಕ್ಷೌರ ಮಾಡಿಸಿದರೆ ದಮ್ (ಪ್ರಾಣಿಬಲಿ) ಕೊಡಬೇಕಾದೀತು.

ಕ್ಷೌರ ಮಾಡಿಸಿಕೊಂಡೊಡನೆ ಇಹ್ರಾಮಿನ ಕುರಿತಾಗಿರುವ ಹೆಚ್ಚಿನೆಲ್ಲ ನಿರ್ಬಂಧಗಳು ಸಡಿಲುಗೊಳ್ಳುತ್ತವೆ. ಆದರೆ ಪತ್ನಿಯೊಂದಿಗೆ ಲೈಂಗಿಕ ಸಂಪರ್ಕ ಮಾತ್ರ ನಿಷಿದ್ಧವಿರುವುದು. ಈ ನಿಷಿದ್ಧವು ತವಾಫ್ ಝಿಯಾರತ್‌ನ ನಂತರ ಮಾತ್ರ ತೆರವಾಗುವುದು.

ಜಮರ ಅಕಬದ ಕಲ್ಲೆಸೆತ, ಪ್ರಾಣಿ ಬಲಿ ಮತ್ತು ತಲೆಕೂದಲು ತೆಗೆಯುವುದನ್ನು ದಿನಾಂಕ 10ರಂದೇ ಮುಗಿಸಬೇಕು. ಇನ್ನು ಸಮಯಾವಕಾಶವಿದ್ದರೆ ಮಕ್ಕಾಕ್ಕೆ ಹೋಗಿ ತವಾಫ್ ಝಿಯಾರತ್ ಮಾಡಿಕೊಂಡು ಬರುವುದು ಉತ್ತಮ. ಆದರೆ ರಾತ್ರಿಯನ್ನು ಮಿನಾದಲ್ಲೇ ಕಳೆಯಬೇಕು.

ಜಮರ ಅಕಬದ ಕಲ್ಲೆಸೆತವನ್ನು ದಿನಾಂಕ 10ರಂದೇ ಮಾಡಿ ಮುಗಿಸಬೇಕಷ್ಟೆ. ಆದರೆ ಪ್ರಾಣಿಬಲಿ, ಕ್ಷೌರ ಮತ್ತು ತವಾಫ್ ಝಿಯಾರತ್ ಮಾಡಲು 12ನೇ ದಿನಾಂಕದ ವರೆಗೂ ಕಾಲಾವಕಾಶವಿದೆ.

## ತವಾಫ್ ಝಿಯಾರತ್ ಅಥವಾ ತವಾಫ್ ಇಫಾಝಃ

ತವಾಫ್ ಝಿಯಾರತ್ ಎಂಬುದು ಒಂದು ರುಕ್ನ್ ಮತ್ತು ಕಡ್ಡಾಯ ಕರ್ಮವಾಗಿದೆ. ಇದರ ಸಮಯವು ದಿನಾಂಕ 10ರ ಸುಬ್‌ಹ್ ಸಾದಿಕ್‌ನಿಂದ 12ರ ಸೂರ್ಯಾಸ್ತಮಾನದ ವರೆಗಿದೆ. ಅನಂತರ ಮಾಡಿದರೆ ದಮ್(ಪ್ರಾಣಿಬಲಿ) ಕೊಡಬೇಕಾದೀತು. ಇಮಾಮ್ ಶಾಫಿಈಯವರ ಪ್ರಕಾರ ತವಾಫ್ ಇಫಾಝದ ಸಮಯ ದಿನಾಂಕ 10ರ ಮಧ್ಯಾಹ್ನದಿಂದ ಆರಂಭಗೊಳ್ಳುತ್ತದೆ. ಅಂದು ಮಧ್ಯಾಹ್ನದ ನಂತರವೇ ಅದರ ಉತ್ತಮ ಸಮಯ. ಆದರೆ ಅದನ್ನು ದಿನಾಂಕ 11, 12 ಮತ್ತು 13ರಂದು ಕೂಡಾ ಮಾಡಬಹುದು. ಮಾತ್ರವಲ್ಲ, ಅದರ ಅವಧಿ ದುಲ್‌ಹಜ್ಜ್ ತಿಂಗಳ ಕೊನೆಯ ವರೆಗೂ ಇರುವುದು.

ತವಾಫ್ ಝಿಯಾರತನ್ನು ದಿನಾಂಕ 10ರಂದು ಕಲ್ಲೆಸೆತ ಮತ್ತು ಕ್ಷೌರ ಮಾಡಿಸಿದ ಬಳಿಕ ಮಾಡುವುದು ಸುನ್ನತ್ ಆಗಿದೆ. ತವಾಫ್ ಝಿಯಾರತ್‌ಗೆ ಇಹ್ರಾಮ್ ಬೇಕೆಂದಿಲ್ಲ.

ಹೊಲಿದ ಬಟ್ಟೆಗಳನ್ನುಟ್ಟು ಕೊಂಡೇ ಮಾಡಬಹುದು. ತವಾಫ್ ಝಿಯಾರತ್ ಯಾವುದೇ ರೀತಿಯಿಂದ ಕೆಡುವುದಿಲ್ಲ. ಅಳಿಯುವುದಿಲ್ಲ ಮತ್ತು ಅದಕ್ಕೆ ಬದಲಿಯೂ ಇಲ್ಲ. ಆದರೆ ವುಕೂಫ್ ಅರಫಾತ್ ಮತ್ತು ಈ ತವಾಫ್‌ನ ಮಧ್ಯೆ ಮೃತಪಟ್ಟರೆ ಹಾಗೂ ಆ ವ್ಯಕ್ತಿಯು ತನ್ನ ಹಜ್ಜನ್ನು ಪೂರ್ತಿಗೊಳಿಸಬೇಕೆಂದು ವಸಿಯ್ಯತ್ ಮಾಡಿದ್ದರೆ ಬುದ್‌ನಃ (ಒಂದು ಜಾನುವಾರು) ಬಲಿ ಕೊಡುವುದರಿಂದ ಹಜ್ಜ್ ಪೂರ್ತಿಗೊಳ್ಳುವುದು. ಆ ವ್ಯಕ್ತಿಯು ತನ್ನ ಮೇಲೆ ಹಜ್ಜ್ ಕಡ್ಡಾಯಗೊಂಡ ವರ್ಷವೇ ಬಂದಿದ್ದರೆ 'ದಮ್' ಸಾಕಾಗುವುದು.

ಈ ತವಾಫ್ ಒಬ್ಬನ ಜೀವಮಾನದಲ್ಲಿ ಯಾವಾಗಲೂ ಮಾಡಬಹುದು. ಅಯ್ಯಾಮುನ್ನಹರ್(10, 11, 12ನೆಯ ದಿನಾಂಕ)ಗಳಲ್ಲಿ ವಾಜಿಬ್ ಆಗಿದೆ. ಇದರೊಳಗೆ ಮಾಡದಿದ್ದರೆ ದಮ್ ಕೊಡಬೇಕಾಗುವುದು. ಅದನ್ನು ನೆರವೇರಿಸಲು ಇಡೀ ಜೀವಮಾನವೇ ಕಳೆದರೂ ಅಷ್ಟರ ವರೆಗೂ ಪತ್ನಿಯೊಂದಿಗೆ ಲೈಂಗಿಕ ಸಂಪರ್ಕ ನಿಷಿದ್ಧ.

ಕ್ಷೌರ ಮಾಡಿಸುವುದಕ್ಕೆ ಮುಂಚೆ ತವಾಫ್ ಝಿಯಾರತ್ ಮಾಡಿದರೆ ಇಹ್ರಾಮ್‌ನ ನಿರ್ಬಂಧಗಳು ಸಡಿಲಾಗಲಾರವು. ಇಹ್ರಾಮಿನ ನಿರ್ಬಂಧಗಳಿಲ್ಲದಾಗಲೂ ಕ್ಷೌರ ಅಗತ್ಯ.

ಸ್ತ್ರೀಯು ಮುಟ್ಟು ಅಥವಾ ಬಾಣಂತಿತನದ ಕಾರಣ ನಿಶ್ಚಿತ ದಿನಗಳಲ್ಲಿ ಈ ತವಾಫ್ ಮಾಡಲಾಗದಿದ್ದರೆ ಅವಳ ಮೇಲೆ ಇದು ವಾಜಿಬ್ (ಕಡ್ಡಾಯ) ಏನೂ ಇಲ್ಲ. ಆದರೆ 12ನೆಯ ದಿನಾಂಕ ಸೂರ್ಯಾಸ್ತಮಾನಕ್ಕೆ ಮುಂಚೆ ಅವಳು ಶುಚಿಯಾಗಿದ್ದು ಕೂಡಲೇ ಸ್ನಾನ ಮಾಡಿ ಮಸ್ಜಿದುಲ್ ಹರಾಮಿಗೆ ತೆರಳಿ ಕನಿಷ್ಠಪಕ್ಷ 4 ಸುತ್ತುಗಳನ್ನಾದರೂ ಬರಲು ಸಾಧ್ಯವಿದ್ದೂ ಅವಳು ತವಾಫ್ ಮಾಡದಿದ್ದರೆ ಅವಳ ಮೇಲೆ 'ದಮ್' ವಾಜಿಬ್ ಆಗುವುದು, ಅನ್ಯಥಾ ಇಲ್ಲ.

ಮುಟ್ಟು ಮತ್ತು ಬಾಣಂತಿತನದ ಕಾರಣ ಸ್ತ್ರೀಯು ತವಾಫ್ ಝಿಯಾರತನ್ನು ಮುಂದೂಡಬಹುದು. ಆದರೆ ಅದನ್ನು ಬಿಟ್ಟು, ಬಿಡಬಾರದು, ತವಾಫ್ ಝಿಯಾರತ್ ಮಾಡಿಯೇ ಸ್ವದೇಶಕ್ಕೆ ಹೋಗಬೇಕು. ಅನ್ಯಥಾ ಜೀವಮಾನವಿಡೀ ಅವಳ ಮೇಲೆ ಅದು ಬಾಕಿಯಾಗಿರುವುದು. ಅದನ್ನು ಮಾಡಿ ಮುಗಿಸುವ ವರೆಗೂ ಪತಿಯೊಂದಿಗೆ ಲೈಂಗಿಕ ಸಂಪರ್ಕವಿರಿಸಬಾರದು.

ಈ ತವಾಫ್ ಮಾಡುವ ಕ್ರಮವು ಇತರ ತವಾಫ್‌ನಂತೆಯೇ ಇದೆ. ಅರ್ಥಾತ್ ತವಾಫ್, ಮಕಾಮು ಇಬ್‌ರಾಹೀಮ್‌ನ ಬಳಿ ನಮಾಝ್ ಇತ್ಯಾದಿ.

## ನಾಲ್ಕನೆಯ ದಿನ (ದುಲ್‌ಹಜ್ಜ್ 11)

ದುಲ್‌ಹಜ್ಜ್ 10ರಂದು ಪ್ರಾಣಿಬಲಿ, ಕ್ಷೌರ ಮತ್ತು ತವಾಫ್ ಝಿಯಾರತ್ ಇವುಗಳ ಪೈಕಿ ಯಾವುದಾದರೂ ಉಳಿದು ಹೋಗಿದ್ದರೆ ಅವುಗಳನ್ನು 11ರಂದು ಮಧ್ಯಾಹ್ನಕ್ಕೆ ಮುಂಚಿತವಾಗಿಯೇ ಮುಗಿಸಿಕೊಳ್ಳುವುದು ಲೇಸು. ಏಕೆಂದರೆ ಅಂದು ಮಧ್ಯಾಹ್ನದ ಬಳಿಕ ಮೂರು ಜಮರಾತ್‌ಗಳಿಗೆ ಕಲ್ಲೆಸೆಯಲಿಕ್ಕಿದೆ. ಅದರ ಸಮಯವು ಮಧ್ಯಾಹ್ನ ದಾಟಿದಲ್ಲಿಂದ

ಸೂರ್ಯಾಸ್ತಮಾನದ ವರೆಗೆ ಇದೆ. 12ರ ಬೆಳಿಗ್ಗೆ ಸುಬ್‌ಹ್ ಸಾದಿಕ್‌ವರೆಗೂ ಮಾಡಬಹುದು. ಆದರೆ ಅದು ಮಕ್‌ರೂಹ್ ಆಗಿದೆ. ಕಲ್ಲೆಸೆಯಬೇಕಾದ ದಿನಗಳ ರಾತ್ರಿಗಳನ್ನು ಮಿನಾದಲ್ಲೇ ಕಳೆಯಬೇಕು. ಬೇರೆ ಕಡೆಗಳಲ್ಲಿ ಕಳೆಯುವುದು ನಿಷಿದ್ಧ.

11ರಂದು ಝುಹರ್ ನಮಾಝನ್ನು ಮಸ್ಜಿದ್ ಖೈಫ್‌ನಲ್ಲಿ ಅಥವಾ ತಂಗಿದ ಸ್ಥಳದಲ್ಲಿ ಮುಗಿಸಿ, ಒಂದನೆಯ ಜಮರಕ್ಕೆ ಹೋಗಿ 7 ಕಲ್ಲುಗಳನ್ನು ಎಸೆಯಬೇಕು. (ಎಸೆಯುವ ಕ್ರಮವನ್ನು ಹಿಂದೆ ವಿವರಿಸಲಾಗಿದೆ) ಕಲ್ಲೆಸೆದ ಬಳಿಕ ಸ್ವಲ್ಪ ದೂರ ಸರಿದು ಕಿಬ್ಲಾಭಿಮುಖವಾಗಿ ನಿಂತು ಕೈಗಳನ್ನೆತ್ತಿ ಕನಿಷ್ಠಪಕ್ಷ 20 ಸೂಕ್ತಗಳನ್ನು ಪಠಿಸುವಷ್ಟು ಹೊತ್ತಾದರೂ ನಿಂತು ದುಆ ಮಾಡಬೇಕು. ದಿಕ್ರ್, ತಕ್ಬೀರ್, ತಹ್ಲೀಲ್, ತೌಬಾ, ಇಸ್ತಿಗ್‌ಫಾರ್ ಮತ್ತು ದರೂದ್‌ಗಳನ್ನು ಹೇಳುತ್ತಿರಬೇಕು. ತನಗಾಗಿ, ತನ್ನವರಿಗಾಗಿ ಮತ್ತು ಸಕಲ ಮುಸ್ಲಿಮರಿಗಾಗಿ ಪ್ರಾರ್ಥಿಸಬೇಕು. ಏಕೆಂದರೆ ಇದು ಕೂಡಾ ದುಆ ಸ್ವೀಕೃತವಾಗುವ ಸ್ಥಳವಾಗಿದೆ.

ಅನಂತರ ಮಧ್ಯದ ಜಮರಕ್ಕೆ ಹೋಗಬೇಕು. ಅಲ್ಲೂ ಅದೇ ರೀತಿ ಕಲ್ಲೆಸೆದು ಸರಿದು ನಿಂತು ದುಆ ಮಾಡಬೇಕು. ಕೊನೆಗೆ ಜಮರ ಅಕಬಕ್ಕೆ ಕಲ್ಲೆಸೆಯಬೇಕು. ಇಲ್ಲಿ ಕಲ್ಲೆಸೆದ ಬಳಿಕ ದುಆ ಮಾಡಲು ನಿಲ್ಲದೆ ಮರಳಬೇಕು. ಅಂದಿನ ಕಾರ್ಯಕ್ರಮ ಇಲ್ಲಿಗೆ ಮುಗಿಯುತ್ತದೆ. ಉಳಿದ ಸಮಯವನ್ನು ದಿಕ್ರ್, ಸದುಪದೇಶ, ಕುರ್‌ಆನ್ ಪಠಣ, ದರೂದ್ ಮೊದಲಾದವುಗಳಲ್ಲಿ ಕಳೆಯಬೇಕು.

## ಐದನೆಯ ದಿನ (ದುಲ್‌ಹಜ್ಜ್ 12)

ದುಲ್‌ಹಜ್ಜ್10ರ ಪ್ರಾಣಿಬಲಿ, ಕ್ಷೌರ ಮತ್ತು ತವಾಫ್ ಝಿಯಾರತ್‌ಗಳ ಪೈಕಿ ಯಾವುದಾದರೂ ಕಡ್ಡಾಯ ಕರ್ಮವು ಬಾಕಿ ಉಳಿದಿದ್ದರೆ, ಅವುಗಳನ್ನು ಇಂದು ಮಧ್ಯಾಹ್ನಕ್ಕೆ ಮುಂಚೆ ಮಾಡಿ ಮುಗಿಸಿಕೊಳ್ಳಬೇಕು. ಏಕೆಂದರೆ ಇಂದು ಮಧ್ಯಾಹ್ನದ ನಂತರವೂ ಮೂರು ಜಮರಾತ್‌ಗಳಿಗೆ ಕಲ್ಲೆಸೆಯುವ ಕಾರ್ಯಕ್ರಮವಿದೆ.

ಇಂದು ಝುಹರ್ ನಮಾಝ್‌ನ ಬಳಿಕ ಮೂರೂ ಜಮರಾತ್‌ಗಳಿಗೆ ಕಲ್ಲುಗಳನ್ನೆಸೆಯಬೇಕು.

ಇದನ್ನು ಮುಗಿಸಿದ ಬಳಿಕ ಮಿನಾದಲ್ಲೇ ಉಳಕೊಳ್ಳಬಹುದು ಅಥವಾ ಮಕ್ಕಾಕ್ಕೆ ಹೋಗಬಹುದು. ಮಕ್ಕಾಕ್ಕೆ ಹೋಗುವುದಾದರೆ ಸೂರ್ಯಾಸ್ತಮಾನಕ್ಕೆ ಮುಂಚಿತವಾಗಿ ಮಿನಾ ಗಡಿಯನ್ನು ದಾಟಿಬಿಡಬೇಕು. 13ನೆಯ ದಿನಾಂಕದ ಮುಂಜಾನೆಯೂ ಮಿನಾದಲ್ಲಿದ್ದರೆ ಅಂದೂ ಮೂರು ಜಮರಾತ್‌ಗಳಿಗೆ ಕಲ್ಲೆಸೆದೇ ಹೋಗಬೇಕಾದುದು ವಾಜಿಬ್ ಆಗಿದೆ. ಅಂದಿನ ಕಲ್ಲೆಸೆತವನ್ನು ಮಧ್ಯಾಹ್ನಕ್ಕೆ ಮುಂಚೆ ಮಾಡಬಹುದು. ಆದರೆ ಮಧ್ಯಾಹ್ನದ ಬಳಿಕವೇ ಮಾಡುವುದು ಸುನ್ನತ್ ಆಗಿದೆ. 13ರಂದು ಸೂರ್ಯಾಸ್ತಮಾನದೊಂದಿಗೆ ಜಮರಾತ್‌ಗಳಿಗೆ ಕಲ್ಲೆಸೆಯುವ ಸಮಯ ಸಮಾಪ್ತಿಗೊಳ್ಳುವುದು. ಬಿಟ್ಟು ಹೋಗಿದ್ದರೆ ಅದರ 'ಕಝಾ' ಕೂಡ ಇಲ್ಲ. ದಮ್ ಕೊಡುವುದು ಮಾತ್ರ ವಾಜಿಬ್ ಆಗುವುದು.

ಹಜ್ಜ್‌ನ ದಿನಗಳಲ್ಲಿ ದಿನವನ್ನು, 'ಮೊದಲು ಹಗಲು ಅನಂತರ ರಾತ್ರಿ' ಎಂದು ಪರಿಗಣಿಸಲಾಗುವುದು. ಉದಾ: ಹಗಲಿನ ನಂತರ ಬರುವ ರಾತ್ರಿಯನ್ನು 10ರ ರಾತ್ರಿಯೆಂದು ಕರೆಯಲಾಗುವುದು. ಆದರೆ 13ರ ಹಗಲಿನ ನಂತರ ಬರುವ ರಾತ್ರಿಯನ್ನು ಮಾತ್ರ 14ರ ರಾತ್ರಿಯೆಂದೇ ಪರಿಗಣಿಸಲಾಗುವುದು.

ದಿನಾಂಕ 12ರ ಜಮರಾತ್‌ಗೆ ಕಲ್ಲೆಸೆದರೂ ತವಾಫ್ ಝಿಯಾರತ್ ಮಾಡದೆ ಉಳಿದಿದ್ದರೆ, ಕಲ್ಲೆಸೆತವನ್ನು ಬೇಗನೆ ಮುಗಿಸಿದ ಕೂಡಲೇ ಮಕ್ಕಾಕ್ಕೆ ತಲಪಿ ಅಂದು ಸೂರ್ಯಾಸ್ತಮಾನಕ್ಕಿಂತ ಮುಂಚೆ ತವಾಫ್ ಝಿಯಾರತ್ ಮಾಡಿ ಮುಗಿಸಿ ಬಿಡಬೇಕು.

## ಮಕ್ಕಾ ನಗರಕ್ಕೆ ಮರಳುವುದು

ರಮ್ಯೊ(ಕಲ್ಲೆಸೆತ) ಮುಗಿಸಿ ದಿನಾಂಕ 12 ಅಥವಾ 13ರಂದು ಮಕ್ಕಾಕ್ಕೆ ಮರಳಬೇಕು. ದಾರಿಯಲ್ಲಿ ಮುಹಸ್ಸಬ್ ಎಂಬ ಕಣಿವೆ ಇದೆ. ಇದು ಮಕ್ಕಾದ ಕಬರಸ್ತಾನದ ಸಮೀಪ ಮಿನಾದ ಕಡೆಗೆ ಎರಡು ಬೆಟ್ಟಗಳ ನಡುವೆ ಇದೆ. ಇದನ್ನು 'ಅಬ್‌ತಹ್', 'ಬತ್‌ಹಾ' ಮತ್ತು 'ಹಸಬಾ' ಎಂದೂ ಕರೆಯುತ್ತಿದ್ದರು. ಈಗ ಅಲ್ಲಿ ಜನ ನಿವಾಸವಿದೆ ಮತ್ತು ಅದನ್ನು 'ಮುಅಬದ' ಎನ್ನುತ್ತಾರೆ.

ಮುಹಸ್ಸಬ್‌ನಲ್ಲಿ ತಂಗುವುದು ಸುನ್ನತ್ ಆಗಿದೆ. ಸ್ವತಂತ್ರ ಪ್ರಯಾಣವಲ್ಲದಿದ್ದರೂ ಅಲ್ಲಿಂದ ಹಾದು ಹೋಗುವಾಗ ದಿಕ್ರ್ ದುಆಗಳನ್ನಾದರೂ ಮಾಡಬೇಕು. ಇನ್ನು ಮಕ್ಕಾದಲ್ಲಿ ವಾಸ್ತವ್ಯ ಹೂಡಿರುವ ವರೆಗೂ ಅದರಿಂದ ಸಂಪೂರ್ಣ ಪ್ರಯೋಜನ ಪಡೆಯಬೇಕು. ಸಾಧ್ಯವಿರುವಷ್ಟು ಹೆಚ್ಚು ತವಾಫ್‌ಗಳನ್ನು ಮಾಡಬೇಕು. ತನ್ನ ಮಾತಾಪಿತರ, ಸಂಬಂಧಿಕರ ಮತ್ತು ಗುರು ಹಿರಿಯರ ಕಡೆಯಿಂದ ತವಾಫ್ ಮಾಡಬೇಕು. ಜಮಾಅತ್ (ಸಾಮೂಹಿಕ ನಮಾಝ್) ಬಿಟ್ಟು ಹೋಗದಂತೆ ನೋಡಿಕೊಳ್ಳಬೇಕು.

ಕೆಲವು ದುಷ್ಟರು ಕ್ಷುಲ್ಲಕ ಭಿನ್ನಾಭಿಪ್ರಾಯಗಳ ಆಧಾರದಲ್ಲಿ ಮಕ್ಕಾ ಮತ್ತು ಮದೀನಾದಲ್ಲಿ ಜಮಾಅತ್‌ನೊಂದಿಗೆ ನಮಾಝ್ ಮಾಡುವುದಿಲ್ಲ. ಇತರರನ್ನೂ ಅದರಿಂದ ತಡೆಯುತ್ತಾರೆ. ಇಂತಹ ಪಿಶಾಚಿಗಳ ಮಾತಿಗೆ ಮರುಳಾಗಬಾರದು. ಜಮಾಅತನ್ನು ಬಿಡಬಾರದು. ನಮ್ಮ ಊರಲ್ಲಿ ಏನೇ ಸಿಕ್ಕಿದರೂ 'ಹರಮೈನ್ ಶರೀಫೈನ್'(ಎರಡು ಪವಿತ್ರ ನಗರಗಳು)ಗಳ ಅನುಗ್ರಹ ಸೌಭಾಗ್ಯಗಳು ಸಿಗಲಾರದಷ್ಟೆ. ಆದುದರಿಂದ ಅದನ್ನು ಕಳೆದುಕೊಳ್ಳ ಬಾರದು. ಸಾಧ್ಯವಾದಷ್ಟು ದಾನಧರ್ಮಗಳನ್ನು ಮಾಡಬೇಕು. ಇಂತಹ ಸೌಭಾಗ್ಯವನ್ನು ಒದಗಿಸಿಕೊಟ್ಟ ಅಲ್ಲಾಹನಿಗೆ ಸದಾ ಕೃತಜ್ಞತೆ ಸಲ್ಲಿಸುತ್ತಿರಬೇಕು.

ಮಕ್ಕಾದಿಂದ ಸ್ವದೇಶಕ್ಕೆ ಮರಳಲು ಪ್ರಯಾಣ ಆರಂಭಿಸುವುದಕ್ಕೆ ಮುಂಚೆ "ತವಾಫ್ ವಿದಾ" (ವಿದಾಯದ ತವಾಫ್) ಮಾಡಬೇಕು.

## ತವಾಫ್ ವಿದಾ (ವಿದಾಯದ ತವಾಫ್)

ಈ ತವಾಫನ್ನು "ತವಾಫ್ ಸದರ್" ಅಥವಾ "ತವಾಫ್ ವಾಜಿಬ್" ಎಂದೂ ಹೇಳುತ್ತಾರೆ. ಈ ತವಾಫ್‌ನ ಬಳಿಕ ಆಫಾಕೀಗಳು ವಿದಾಯ ಹೇಳುವುದರಿಂದ ಇದನ್ನು "ತವಾಫ್ ವಿದಾ" ಎಂದು ಹೇಳುತ್ತಾರೆ.

ಈ ತವಾಫ್ ಮೀಕಾತ್‌ನಿಂದ ಹೊರಗಿರುವ ಎಲ್ಲ ಹಾಜಿಗಳ ಮೇಲೆ ವಾಜಿಬ್ ಆಗಿರುತ್ತದೆ. ಅವನು ಯಾವ ತರದ ಹಜ್ಜ್ ಮಾಡಿದ್ದರೂ ಸರಿಯೇ. ಹರಮ್ ನಿವಾಸಿಗಳಿಗೆ, ಹಿಲ್ಲ್ ವಾಸಿಗಳಿಗೆ, ಮೀಕಾತ್‌ನಲ್ಲೇ ವಾಸಿಸುವವರಿಗೆ ಹಾಗೂ ಮುಟ್ಟಾದ ಅಥವಾ ಬಾಣಂತಿಯರಿಗೆ, ಮಾನಸಿಕ ರೋಗಿಗಳಿಗೆ ಮತ್ತು ಅಪ್ರಬುದ್ಧ ಮಕ್ಕಳಿಗೆ ವಾಜಿಬ್ ಅಲ್ಲ.

ತವಾಫ್ ವಿದಾವನ್ನು ತವಾಫ್ ಝಿಯಾರತ್ ಮುಗಿಸಿದ ಬಳಿಕ ಯಾವಾಗಲೂ ಮಾಡಬಹುದು. ಎಲ್ಲಾ ಕೆಲಸಗಳನ್ನೂ ಮುಗಿಸಿಕೊಂಡ ಬಳಿಕ ಪ್ರಯಾಣ ಆರಂಭಿಸುವುದಕ್ಕೆ ಮುಂಚೆ ಮಾಡುವುದು ಮುಸ್ತಹಬ್ ಆಗಿದೆ.

ಮುಟ್ಟಾದವರು ಬಾಣಂತಿಯರು ಶುದ್ಧಿಯಾಗುವ ವರೆಗೆ ಸಾಧ್ಯವಾದರೆ ಕಾಯುವುದು ಲೇಸು. ಸಮಯವಿಲ್ಲವೆಂದಾದರೆ ತವಾಫ್ ಬೇಕಾಗಿಲ್ಲ. "ಬಾಬುಲ್ ವಿದಾ" (ವಿದಾಯ ದ್ವಾರ)ದಲ್ಲಿ ನಿಂತು ದುಆ ಮಾಡಿದರೆ ಸಾಕು. ಮಕ್ಕಾ ಬಿಡುವುದಕ್ಕೆ ಮುಂಚೆ ಶುದ್ಧಿಯಾದರೆ, ಮರಳಿ ಬಂದು ತವಾಫ್ ವಿದಾ ಮಾಡಬೇಕು. ಮಕ್ಕಾ ಬಿಟ್ಟು ಹೊರಗೆ ಹೋದ ಮೇಲೆ ಶುದ್ಧಿಯಾದರೆ ಅಗತ್ಯವಿಲ್ಲ.

ತವಾಫ್ ವಿದಾ ಮಾಡದೆ ಹೋಗಿದ್ದು, ಇನ್ನೂ ಮೀಕಾತ್ ದಾಟಿರದಿದ್ದರೆ, ಮರಳಿ ಬಂದು ಮಾಡಬೇಕು. ಇದಕ್ಕೆ ಇಹ್ರಾಮ್ ಬೇಕೆಂದಿಲ್ಲ. ಮೀಕಾತ್ ದಾಟಿ ಹೋದ ಮೇಲೆ ಮರಳುವುದಿದ್ದರೆ ಉಮ್ರಾ ಮಾಡಲು ಇಹ್ರಾಮ್ ಕಟ್ಟಿ ಬರಬೇಕಾಗುವುದು.

ತವಾಫ್ ವಿದಾ ಮಾಡುವಾಗ ರಮಲ್, ಇಝ್ತಿಬಾಅ್ ಮತ್ತು ಸಈಗಳನ್ನು ಮಾಡಬೇಕಾಗಿಲ್ಲ. ತವಾಫನ್ನು ಮಾತ್ರ ಮಾಡಿ ಮಕಾಮು ಇಬ್‌ರಾಹೀಮ್‌ನಲ್ಲಿ ನಮಾಝ್ ಮಾಡಬೇಕು. ತರುವಾಯ ಬೇಕಾದಷ್ಟು ಝಮ್‌ಝಮ್ ಕುಡಿದು ಸ್ವಲ್ಪ ತಲೆಗೂ ಹೊಯ್ದುಕೊಂಡು ದುಆ ಮಾಡಬೇಕು. ವಿದಾಯಕ್ಕಾಗಿ ತುಂಬಾ ದುಃಖಿಸುತ್ತಾ ಮುಲ್ತಝಿಮನ್ನು ಹಿಡಿದು ದುಆ ಮಾಡಬೇಕು. ಅನಂತರ ಹಜರುಲ್ ಅಸ್ವದನ್ನು ಚುಂಬಿಸಿ, ಅಲ್ಲಾಹನ ಭವನವನ್ನು ಶೋಕತಪ್ತವಾಗಿ ನೋಡುತ್ತಾ ಬಾಬುಲ್ ವಿದಾ(ವಿದಾಯ ದ್ವಾರ)ದಿಂದ ಹೊರಬರಬೇಕು. ದ್ವಾರದಲ್ಲಿ ನಿಂತು ಪುನಃ ದುಆ ಮಾಡಿ ಮರಳಬಹುದು.

## ಮದೀನಾ ಸಂದರ್ಶನ

ಹಜ್ಜ್ ಯಾತ್ರೆಗೆ ಹೋದ ಸಂದರ್ಭದಲ್ಲಿ ಯಾತ್ರಿಕರು ಮದೀನಾಕ್ಕೂ ಹೋಗಿ ಮಸ್ಜಿದ್ ನಬವೀ ಮತ್ತು ಪ್ರವಾದಿ ಮುಹಮ್ಮದ್‌ರ(ಸ) ಸಮಾಧಿಯನ್ನು ಸಂದರ್ಶಿಸುವುದು

ಸುನ್ನತ್ ಆಗಿದೆ. ಮದೀನಾ ಪಟ್ಟಣವು ದೇವವಾಣಿ ಅವತೀರ್ಣಗೊಳ್ಳುತ್ತಿದ್ದ ಸ್ಥಳ. ಅದು ಇಸ್ಲಾಮಿನ ಕೇಂದ್ರ ಸ್ಥಾನ ಮತ್ತು ಜಗತ್ತಿನ ಹೃದಯವಾಗಿರುತ್ತದೆ. "ನನ್ನ ಮಸೀದಿ (ಮಸ್ಜಿದ್ ನಬವೀ)ಯಲ್ಲಿ ಮಾಡಿದ ನಮಾಝ್ ಮಸ್ಜಿದುಲ್ ಹರಾಮ್‌ನ ಹೊರತು, ಜಗತ್ತಿನ ಸಕಲ ಮಸೀದಿಗಳಲ್ಲಿ ಮಾಡಿದ ನಮಾಝ್‌ಗಳಿಗಿಂತ ಸಾವಿರ ಪಟ್ಟು ಪುಣ್ಯದಾಯಕವಾಗಿದೆ" ಎಂದು ಪ್ರವಾದಿವರ್ಯರು(ಸ) ಹೇಳಿರುತ್ತಾರೆ. (ಮುಸ್ಲಿಮ್)

ಮದೀನಾ ಸಂದರ್ಶನವನ್ನು ಹಜ್ಜ್ ಯಾತ್ರೆಗಿಂತ ಮೊದಲೂ ಮಾಡಬಹುದು. ಹಜ್ಜ್ ಮುಗಿಸಿಕೊಂಡ ಬಳಿಕವೂ ಮಾಡಬಹುದು. ಮದೀನಾ ಸಂದರ್ಶಿಸಿ ಬರುವಾಗ ಹಜ್ಜ್ ತಪ್ಪಿಹೋಗುವ ಭಯವಿದ್ದರೆ, ಹಜ್ಜ್ ಕರ್ಮ ಮುಗಿಸಿಯೇ ಮದೀನಾ ಸಂದರ್ಶಿಸುವುದು ಉತ್ತಮ.

## ಮದೀನಾಕ್ಕೆ ಪ್ರಯಾಣ

ಈಗ ಮಕ್ಕಾದಿಂದ ನೇರವಾಗಿ ಮದೀನಾಕ್ಕೆ ಹೋಗಲು ಅಗಲವಾದ ಮಾರ್ಗವಿದೆ. ಟ್ಯಾಕ್ಸಿ ಬಸ್ಸುಗಳು ರಾತ್ರೆ ಹಗಲು ಓಡಾಡುತ್ತಿವೆ. ದಾರಿಯಲ್ಲಿ ರಾಬಿಗ್, ಮಸ್ತೂರ, ಬದ್ರ್, ಮಸ್ಯೆಜದ್ ಎಂಬ ಮುಖ್ಯ ತಂಗುದಾಣಗಳಿದ್ದು ಅಲ್ಲಿ ಊಟ ಉಪಹಾರಾದಿಗಳಿಗೆ ಅನುಕೂಲತೆಗಳಿವೆ. ಮಸ್ತೂರದ ಮೀನು ಬಹಳ ಪ್ರಸಿದ್ಧ.

ಮಕ್ಕಾದಿಂದ ಮದೀನಾಕ್ಕೆ ಸುಮಾರು 450 ಕಿ.ಮೀ. ದೂರವಿದೆ. ವಾಹನ ಚಾಲಕರನ್ನು ಒಲಿಸಿಕೊಂಡರೆ ದಾರಿಯಲ್ಲಿರುವ ಐತಿಹಾಸಿಕ ಸ್ಥಳಗಳನ್ನೂ ಮಸೀದಿಗಳನ್ನೂ ನೋಡಿಕೊಂಡು ಹೋಗಬಹುದು. ಮುಖ್ಯವಾಗಿ ಬದ್ರ್ ಯುದ್ಧ ನಡೆದ ಸ್ಥಳ. ದಾರಿಯುದ್ದಕ್ಕೂ ವೃಥಾ ಮಾತುಕತೆಯಲ್ಲಿ ಕಾಲ ಕಳೆಯದೆ, ಪ್ರವಾದಿವರ್ಯರ(ಸ) ಆದರ್ಶ ಜೀವನದ ವೃತ್ತಾಂತವನ್ನು ಸ್ಮರಿಸುತ್ತ ದರೂದ್, ಸಲಾಮ್ ಮತ್ತು ದುಆಗಳೊಂದಿಗೆ ಮುಂದುವರಿಯಬೇಕು. ಮದೀನಾ ಸಮೀಪಿಸುತ್ತಿರುವಂತೆಯೇ ಉತ್ಸಾಹ, ಪ್ರವಾದಿ ಪ್ರೇಮ, ತನ್ಮಯತೆ, ದರೂದ್ ಮತ್ತು ಸಲಾಮ್‌ಗಳನ್ನು ಹೆಚ್ಚಿಸಬೇಕು.

ಪ್ರಯಾಣಕಾಲದಲ್ಲಿ ಯಾವಾಗಲೂ ವುಝೂ ಸಹಿತವಾಗಿರುವುದು ಉತ್ತಮ. ವುಝೂ ಇಲ್ಲದಿದ್ದರೆ, ನಗರವನ್ನು ಪ್ರವೇಶಿಸುವುದಕ್ಕೆ ಮುಂಚೆಯೇ ಮಾಡಿಕೊಳ್ಳುವುದು ಲೇಸು. ಮುಂದೆ ಮಸ್ಜಿದ್ ನಬವೀಗೆ ಹೋಗಲಿಕ್ಕಿದೆಯಷ್ಟೆ. ನಗರವನ್ನು ಪ್ರವೇಶಿಸಿದ ಬಳಿಕ ಸಾಮಾನುಗಳನ್ನೆಲ್ಲ ಒತ್ತಟ್ಟಿಗಿರಿಸುವ ವ್ಯವಸ್ಥೆ ಮಾಡಿ, ಮೊತ್ತ ಮೊದಲು ಮಸ್ಜಿದ್ ನಬವೀಗೆ ಹೋಗಬೇಕು.

ಮಸ್ಜಿದ್ ನಬವೀಯನ್ನು ಹಳೆಯ ಭಾಗ ಮತ್ತು ಹೊಸ ಭಾಗಗಳಾಗಿ ವಿಂಗಡಿಸಬಹುದು. ಟರ್ಕಿ ಸುಲ್ತಾನರ ಕಾಲದಲ್ಲಿ ನಿರ್ಮಿಸಲಾಗಿದ್ದ ಹಳೆಯ ಭಾಗದಲ್ಲಿ ಕೆಂಪು ಬಣ್ಣದ ಸ್ತಂಭಗಳಿವೆ. ಸೌದಿ ಸರಕಾರವು ಅಭಿವೃದ್ಧಿಗೊಳಿಸಿದ ಹೊಸಭಾಗವು ಪ್ರತ್ಯೇಕವಾಗಿ ಕಂಗೊಳಿಸು ತ್ತದೆ. ಹಳೆಯ ಭಾಗದಲ್ಲಿ ಪೂರ್ವಕ್ಕೆ ಪ್ರವಾದಿವರ್ಯರ(ಸ) ಸಮಾಧಿಯಿರುವ ಕಟ್ಟಡವಿದೆ.

بِسْمِ اللهِ الرَّحْمَانِ الرَّحِيمِ 'ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್' ಎನ್ನುತ್ತಾ ಎಲ್ಲ ಮಸೀದಿಗಳಿಗೆ ಪ್ರವೇಶಿಸುವಾಗ ಮಾಡುವ ದುಆದೊಂದಿಗೆ ಪೂರ್ವಕ್ಕಿರುವ 'ಬಾಬು ಜಿಬ್‌ರೀಲ್' ದ್ವಾರದಿಂದ (ಯಾವ ದ್ವಾರದಿಂದಲೂ ಪ್ರವೇಶಿಸಬಹುದು) ಮಸ್ಜಿದುನ್ನಬವಿಗೆ ಮೊದಲು ಬಲಗಾಲನ್ನು ಒಳಗಿಟ್ಟು ಪ್ರವೇಶಿಸಬೇಕು. ಮುಂದೆ ನಡೆಯುವಾಗ ಎಡಕ್ಕೆ ಸಮಾಧಿಯ ಕಟ್ಟಡವೂ ಬಲಕ್ಕೆ 40 ಅಡಿ ಉದ್ದ, 40 ಅಡಿ ಅಗಲ ಮತ್ತು 2 ಅಡಿ ಎತ್ತರದ ಒಂದು ವೇದಿಕೆಯೂ ಕಾಣಸಿಗುವುದು. ಈ ವೇದಿಕೆಯ ಮೂರು ಭಾಗಗಳಿಗೆ ಹಿತ್ತಾಳೆಯ ಆವರಣವಿದೆ. ಇದುವೇ 'ಅಸ್ಹಾಬುಸ್ಸುಫ್ಫ'ರ ಅಂಗಣ. ಸಾಮೂಹಿಕ ನಮಾಝ್‌ಗಳ ಸಮಯದಲ್ಲಿ ಮಾತ್ರವಲ್ಲದೆ, ಬೇರೆ ಸಮಯದಲ್ಲೂ ಅದು ಜನರಿಂದ ತುಂಬಿರುತ್ತದೆ. ಅಲ್ಲಿ ಜನರು ನಮಾಝ್, ಕುರ್‌ಆನ್ ಪಠಣ ಮತ್ತು ದಿಕ್ರ್ ಮಾಡುತ್ತಾ ಇರುತ್ತಾರೆ. ಅದಕ್ಕೆ ತಾಗಿ ಮುಂದಿರುವ ಕಿರು ಜಗಲಿಯಲ್ಲಿ ಮಸೀದಿಯ ಸೇವಕರೂ ಪರಿಚಾರಕರೂ ಕುಳಿತಿರುತ್ತಾರೆ.

ಸುಫ್ಫ ಅಂಗಣವನ್ನು ದಾಟಿ ಎಡಕ್ಕೆ ಕೆಲವೇ ಹೆಜ್ಜೆ ನಡೆದಾಗ ಕೆಳಗಿನ ಭಾಗ ಬೆಳ್ಳಗಾಗಿ ಮತ್ತು ಮೇಲಿನ ಭಾಗ ಕೆಂಪಾಗಿ ಇರುವ ಕೆಲವು ಸ್ತಂಭಗಳು ತೋರುತ್ತದೆ. ರೌದತುಮ್ಮಿನ್ ರಿಯಾದಿಲ್ ಜನ್ನಃ ಎಂಬ ಭಾಗವನ್ನು ಗುರುತಿಸಲಿಕ್ಕಾಗಿ ಈ ಸ್ತಂಭಗಳಿವೆ. ಪ್ರವಾದಿವರ್ಯರು(ಸ) ನಮಾಝ್‌ಗೆ ನಿಲ್ಲುತ್ತಿದ್ದ ಮಿಹ್ರಾಬ್ ಅಲ್ಲೇ ಇತ್ತು. ಅಲ್ಲೇ ಬಲಗಡೆ ದೂರದಲ್ಲಿ ಪ್ರವಾದಿವರ್ಯರು(ಸ) "ಖುತ್‌ಬಾ" ಮಾಡುತ್ತಿದ್ದ ಜಾಗದಲ್ಲಿ ಈಗ ಸುಂದರವಾದ ಮಿಂಬರನ್ನು ಕಟ್ಟಲಾಗಿದೆ. ಮಿಂಬರಿನ ಎದುರೇ ಸ್ವಲ್ಪ ದೂರದಲ್ಲಿ ಸುಮಾರು 5 ಅಡಿ ಎತ್ತರದ ಒಂದು ವೇದಿಕೆ ಇದೆ. ಅದರಲ್ಲಿ ಅದಾನ್ ಕೊಡಲಾಗುತ್ತದೆ. ಪ್ರವಾದಿವರ್ಯರ(ಸ) ಕಾಲದಲ್ಲಿ ಹ. ಬಿಲಾಲ್(ರ) ಅದಾನ್ ಕೊಡುತ್ತಿದ್ದ ಸ್ಥಳ ಅದೇ ಆಗಿತ್ತು.

ರೌದತುಮ್ಮಿನ್ ರಿಯಾದಿಲ್ ಜನ್ನಕ್ಕೆ ತಲಪಿದೊಡನೆ 'ತಹಿಯ್ಯತುಲ್ ಮಸ್ಜಿದ್'ನ ನಿಯ್ಯತ್‌ನೊಂದಿಗೆ ಎರಡು ರಕಅತ್ ನಫಿಲ್ ನಮಾಝ್ ಮಾಡಿ ದುಆ ಮಾಡಬೇಕು. ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸುತ್ತ ಅವನನ್ನು ಸ್ತುತಿಸುತ್ತ ಇಹಪರಗಳ ಶ್ರೇಯಸ್ಸಿಗಾಗಿ ಮತ್ತು ತನ್ನ ಆರಾಧನೆ ಝಿಯಾರತ್‌ಗಳು ಸ್ವೀಕೃತವಾಗಲು ಪ್ರಾರ್ಥಿಸುತ್ತ ಅಲ್ಲಿಂದೆದ್ದು ಮುಂದೆ ನಡೆಯಬೇಕು. ಎಡಕ್ಕೆ ತಿರುಗಿ ಕೆಲವೇ ಹೆಜ್ಜೆ ಮುಂದೆ ನಡೆದು ಅಲ್ಲಿ ಎಡ ಬದಿಗಿರುವ ಕಟ್ಟಡದಲ್ಲಿ ಹಿತ್ತಾಳೆಯ ಜಾಲರಿ(ಗ್ರಿಲ್)ಗಳಿರುವ ವಿಶಾಲವಾದ ಕಿಟಕಿಗಳನ್ನು ಕಾಣಬಹುದು. ಅದರಲ್ಲಿ ದೂರದೂರಕ್ಕೆ ಮೂರು ವೃತ್ತಾಕಾರದ ಕಿಂಡಿಗಳಿವೆ. ಮೊದಲು ಸಿಗುವ ಕಿಂಡಿ ಸ್ವಲ್ಪ ದೊಡ್ಡದು. ಅಲ್ಲೇ ಒಳಭಾಗದಲ್ಲಿ ಅಂತಿಮ ಪ್ರವಾದಿ ಹ. ಮುಹಮ್ಮದ್‌ರ(ಸ) ಸಮಾಧಿ ಇದೆ. ಅಲ್ಲಿ ಜಾಲರಿಗೆ ತಾಗದೆ ದೂರ ನಿಂತು, ಕಿಂಡಿಯ ಕಡೆಗೆ ಮುಖ ಮಾಡಿ, ಅಸಭ್ಯವಾಗಿ ವರ್ತಿಸದೆ, ದರೂದ್ ಸಲಾಮ್‌ಗಳ ಕಾಣಿಕೆಯನ್ನು ಪ್ರವಾದಿವರ್ಯರಿಗೆ(ಸ) ಸಲ್ಲಿಸಬೇಕು. ಸಮಾಧಿಯ ಮುಂದೆ ನೂಕು ನುಗ್ಗಲು, ಜಾಲರಿಯನ್ನು ಮುಟ್ಟುವುದು,

ಅದನ್ನು ಚುಂಬಿಸುವುದು, ಗಟ್ಟಿಯಾಗಿ ರೋದಿಸುವುದು ಇವೆಲ್ಲ ಅಸಭ್ಯ ವರ್ತನೆಗಳಾಗಿವೆ. ಜನಸಂದಣಿ ಹೆಚ್ಚಿದ್ದರೆ ದೂರದಲ್ಲೇ ನಿಂತು ದರೂದ್ ಸಲಾಮ್‌ಗಳನ್ನು ಹೇಳಬಹುದು.

ಪ್ರವಾದಿವರ್ಯರಿಗೆ(ಸ) ದರೂದ್ ಸಲಾಮ್‌ಗಳನ್ನು ಸಲ್ಲಿಸಿದ ಬಳಿಕ ಎರಡು ಹೆಜ್ಜೆ ಬಲಕ್ಕೆ ನಡೆದಾಗ ಸ್ವಲ್ಪ ಸಣ್ಣದಾದ ಇನ್ನೊಂದು ಕಿಂಡಿ ಸಿಗುತ್ತದೆ. ಅಲ್ಲೇ ಒಳಗೆ ಹ.ಅಬೂಬಕರ್ ಸಿದ್ದೀಕ್‌ರ(ರ) ಸಮಾಧಿ ಇದೆ. ಎರಡು ಹೆಜ್ಜೆ ಬಲಕ್ಕೆ ಇರುವ ಕಿಂಡಿಯ ಆಚೆಗೆ ಹ. ಉಮರ್‌ರ(ರ) ಸಮಾಧಿ ಇದೆ. ಅನುಕ್ರಮವಾಗಿ ಅವರಿಬ್ಬರಿಗೂ ಸಲಾಮಿನ ಕಾಣಿಕೆಯನ್ನು ಸಲ್ಲಿಸಬೇಕು. ಆ ಮೂರು ಕಡೆಗಳಲ್ಲಿ ತಮ್ಮ ಸಲಾಮನ್ನು ಸಲ್ಲಿಸಬೇಕೆಂದು ಯಾರಾದರೂ ಹೇಳಿದ್ದರೆ ಮತ್ತು ಅದನ್ನು ನೀವು ಒಪ್ಪಿಕೊಂಡಿದ್ದರೆ, ಅವರ ಕಡೆಯಿಂದಲೂ ಸಲ್ಲಿಸಬೇಕು.

ಅನಂತರ ಕಿಬ್ಲಾಭಿಮುಖವಾಗಿ ನಿಂತು ನಿಮಗಾಗಿ, ನಿಮ್ಮ ಮಾತಾಪಿತರಿಗಾಗಿ, ಗುರು ಹಿರಿಯರಿಗಾಗಿ, ಇಷ್ಟಮಿತ್ರರಿಗಾಗಿ ಹಾಗೂ ಸಕಲ ಮುಸ್ಲಿಮರಿಗಾಗಿ ಇಹಪರಗಳ ವಿಜಯಕ್ಕಾಗಿ ಹೃತ್ಪೂರ್ವಕ ಅಲ್ಲಾಹನೊಡನೆ ದುಆ ಮಾಡಬೇಕು. ಇದು ಝಿಯಾರತ್‌ನ ಕ್ರಮ.

ಮದೀನಾದಲ್ಲಿ ತಂಗಿರುವ ವರೆಗೂ ಮಸ್ಜಿದ್ ನಬವೀಯಲ್ಲಿ ಸಾಮೂಹಿಕ ನಮಾಝ್ ತಪ್ಪಿಹೋಗದಂತೆ ನೋಡಿಕೊಳ್ಳಬೇಕು. ಮೇಲೆ ಹೇಳಿದಂತೆ ಆಗಾಗ ಸಮಾಧಿ ಸಂದರ್ಶನ ನಡೆಸುತ್ತಿರಬೇಕು.

ಪವಿತ್ರ ಮದೀನಾ ನಗರದ ಪ್ರಸಿದ್ಧ ಕಬರಸ್ತಾನವು 'ಜನ್ನತುಲ್ ಬಕೀಅ್' ಆಗಿದೆ. ಇದು ಮಸ್ಜಿದ್ ನಬವೀಯ ಪೂರ್ವ ದಿಕ್ಕಿನಲ್ಲಿ ಸ್ವಲ್ಪ ದೂರದಲ್ಲಿದೆ. ಉಮ್ಮುಲ್ ಮೂಮಿನೀನ್(ವಿಶ್ವಾಸಿಗಳ ಮಾತೆ) ಹ. ಖದೀಜರನ್ನು(ರ) ಬಿಟ್ಟು ಉಳಿದ ಎಲ್ಲ ಉಮ್ಮಹಾತುಲ್ ಮೂಮಿನೀನ್‌ರ, ಸಾವಿರಾರು ಮಂದಿ ಸಹಾಬಿಗಳ, ಪ್ರವಾದಿವರ್ಯರ(ಸ) ಪುತ್ರಿಯರ ಮತ್ತು ಪುತ್ರ ಇಬ್‌ರಾಹೀಮ್, ಅಬ್ಬಾಸ್, ಉಸ್ಮಾನ್, ಇಮಾಮ್ ಹಸನ್, ಅಕೀಲ್ ಬಿನ್ ಅಬೀತಾಲಿಬ್, ಹಲೀಮಾ ಸಅದಿಯ್ಯ, ಪ್ರವಾದಿವರ್ಯರ(ಸ) ಸೋದರತ್ತೆಯಂದಿರ ಮತ್ತು ಇತರ ಅನೇಕ ಮಹಾಪುರುಷರ(ರ) ಸಮಾಧಿಗಳು ಅಲ್ಲಿವೆ. ಅಲ್ಲಿಗೆ ಹೋದಾಗ ಅಥವಾ ಆ ದಾರಿಯಾಗಿ ಹೋಗುವಾಗ ಅವರಿಗೆ ಸಲಾಮ್ ಹೇಳಬೇಕು ಮತ್ತು ದುಆ ಮಾಡಬೇಕು. ಇದು ಎಲ್ಲ ಕಬರಸ್ತಾನಗಳ ಸಂದರ್ಶನದ ವೇಳೆ ಇರುವಂತೆಯೇ ಆಗಿರಬೇಕು.

ಬಿಡುವಿನ ಸಮಯದಲ್ಲಿ ಉಹುದ್ ಮತ್ತು ಕಂದಕ ಯುದ್ಧಗಳು ನಡೆದ ಸ್ಥಳಗಳನ್ನೂ ಮದೀನಾ ನಗರದ ಒಳ ಹೊರಗುಗಳಲ್ಲಿ ಇರುವ ಅನೇಕ ಇಸ್ಲಾಮಿನ ಇತಿಹಾಸ ಪ್ರಸಿದ್ಧ ಸ್ಥಳಗಳನ್ನೂ ಸಂದರ್ಶಿಸಬೇಕು. ಪ್ರವಾದಿವರ್ಯರಿಗೂ(ಸ) ಸಹಾಬಿಗಳಿಗೂ ಸಂಬಂಧಿಸಿದ ಅನೇಕ ಸ್ಥಳಗಳಲ್ಲಿ ಈಗ ಸಣ್ಣ ಸಣ್ಣ ಮಸೀದಿಗಳಿವೆ. ಇತರ ಮಸೀದಿಗಳ ಪೈಕಿ ಪ್ರವಾದಿವರ್ಯರು(ಸ) ಸ್ವಯಂ ಭಾಗವಹಿಸಿ ಕಟ್ಟಿದ "ಮಸ್ಜಿದ್ ಕುಬಾ" ಮುಖ್ಯವಾದುದು. ಮಸೀದಿಗಳನ್ನು ಸಂದರ್ಶಿಸುವಾಗ ತಹಿಯ್ಯತುಲ್ ಮಸ್ಜಿದ್‌ನ ನಿಯ್ಯತಿನೊಂದಿಗೆ ಎರಡು

ರಕಅತ್ ನಫಿಲ್ ನಮಾಝ್ ಮಾಡಲು ಮರೆಯಬಾರದು. ಕೆಲವು ಮಸೀದಿಗಳ ಕಟ್ಟಡಗಳು ವಾಸ್ತುಶಿಲ್ಪದ ಅತ್ಯುತ್ತಮ ಮಾದರಿಯಾಗಿದೆ. ಮುಖ್ಯವಾಗಿ ಮಕ್ಕಾದ ಮಸ್ಜಿದುಲ್ ಹರಾಮ್, ಮದೀನಾದ ಮಸ್ಜಿದುನ್ನಬವೀ ಮತ್ತು ಮಸ್ಜಿದ್ ಕುಬಾ. ಮಸೀದಿಗಳ ಸಂದರ್ಶನವು ನಮಾಝ್ ಮಾಡಲಿಕ್ಕಾಗಿಯೇ ವಿನಾ ಕಲಾ ನೈಪುಣ್ಯಗಳನ್ನು ನೋಡಿ ಆನಂದಿಸಲಿಕ್ಕೆ ಆಗಿರಬಾರದು. ಅದೇ ರೀತಿ ಇನ್ನಿತರ ಮಸೀದಿಗಳಾದ ಮಸ್ಜಿದ್ ಜುಮುಅ, ಮಸ್ಜಿದ್ ಗಮಾಮಃ, ಮಸ್ಜಿದ್ ಸುಕ್‌ಮಾ, ಮಸ್ಜಿದ್ ಫತಹ್, ಮಸ್ಜಿದ್ ಬನೀಹರಾಮ್, ಮಸ್ಜಿದ್ ದುಬಾಬ್, ಮಸ್ಜಿದ್ ಕಿಬ್ಲತೈನ್, ಮಸ್ಜಿದ್ ಫಳೀಹ್, ಮಸ್ಜಿದ್ ಬನೀಝುಫರ್, ಮಸ್ಜಿದ್ ಇಜಾಬಃ, ಮಸ್ಜಿದ್ ಸಜ್ದಃ, ಮಸ್ಜಿದ್ ಉಬೈ, ಮಸ್ಜಿದ್ ಅಬೂಬಕರ್, ಮಸ್ಜಿದ್ ಉಮರ್, ಮಸ್ಜಿದ್ ಅಲೀ ಮೊದಲಾದ ಮಸೀದಿಗಳನ್ನೂ ಸಂದರ್ಶಿಸಬಹುದು. ಆದರೆ ಈ ಸಂದರ್ಶನದಿಂದಾಗಿ ಮಸ್ಜಿದ್ ನಬವೀಯ ಸಾಮೂಹಿಕ ನಮಾಝ್ ತಪ್ಪಿ ಹೋಗದಂತೆ ಜಾಗರೂಕರಾಗಿರಬೇಕು.

ಪ್ರವಾದಿವರ್ಯರು(ಸ) ಸ್ವಯಂ ಭಾಗವಹಿಸಿ ಸಹಾಬಿಗಳ(ರ) ಸಹಾಯದಿಂದ ಕಟ್ಟಿದ ಮಸ್ಜಿದುನ್ನಬವೀ ಮತ್ತು ಮಸ್ಜಿದ್ ಕುಬಾಗಳ ಆಗಿನ ಕಟ್ಟಡಗಳು ಅತ್ಯಂತ ಸಾದಾ ಆಗಿದ್ದುವು ಎಂಬುದನ್ನು ಮರೆಯಬಾರದು. ಅವು ಹಲವು ಹಂತಗಳನ್ನು ದಾಟಿಕೊಂಡು ಈಗಿರುವ ರೂಪಕ್ಕೆ ಬಂದಿವೆ.

ಹಜ್ಜ್ ಮತ್ತು ಝಿಯಾರತ್ ಮುಗಿಸಿ ಸ್ವದೇಶಕ್ಕೆ ಮರಳುವಾಗ ತಮ್ಮ ಬಂಧುಮಿತ್ರರಿಗೆ ಕಾಣಿಕೆಯಾಗಿ ಕೊಡಲು ಒಯ್ಯಬೇಕಾದ ವಸ್ತುಗಳು ಮಕ್ಕಾದಿಂದ ಝಮ್ ಝಮ್ ನೀರು ಮತ್ತು ಮದೀನಾದಿಂದ ಖರ್ಜೂರಗಳಾಗಿವೆ. ಹಜ್ಜ್ ಮತ್ತು ಝಿಯಾರತ್‌ಗಳನ್ನು ಧರ್ಮ ಶಾಸ್ತ್ರೋಕ್ತವಾಗಿ ಮತ್ತು ಶ್ರದ್ಧಾಪೂರ್ವಕವಾಗಿ ಮಾಡಿ ಮುಗಿಸಿ ಸ್ವದೇಶಕ್ಕೆ ಮರಳಿ ಬಂದ ಮೇಲೆ ಮುಂದಿನ ಜೀವಮಾನವನ್ನು ಅತ್ಯಂತ ಧರ್ಮನಿಷ್ಠೆಯೊಂದಿಗೆ ಕಳೆಯಬೇಕು.

ಅಲ್ಲಾಹನು ಎಲ್ಲರಿಗೂ ಇದರ ಅನುಗ್ರಹ ಪ್ರದಾನ ಮಾಡಲಿ. ನಮ್ಮ ಆರಾಧನೆ ಮತ್ತು ಪ್ರಾರ್ಥನೆಗಳನ್ನು ಸ್ವೀಕರಿಸಲಿ. ಇಹದಲ್ಲಿ ಕ್ಷೇಮವನ್ನೂ ಪರದಲ್ಲಿ ಮೋಕ್ಷವನ್ನೂ ಕರುಣಿಸಲಿ- ಆಮೀನ್

## ಹಜ್ಜ್ ಕರ್ಮಕ್ಕೆ ಸಂಬಂಧಿಸಿದ ಪಾರಿಭಾಷಿಕಗಳು

ಹಜ್ಜ್ ವಿಧಿಕರ್ಮಗಳಲ್ಲಿ ಕೆಲವು ನಿರ್ದಿಷ್ಟ ಸ್ಥಳಗಳು ಮತ್ತು ಪಾರಿಭಾಷಿಕ ಪದಗಳಿವೆ. ಯಾತ್ರಿಕನು ಅವುಗಳನ್ನು ತಿಳಿದರೆ ಬಹಳ ಅನುಕೂಲವಾಗುತ್ತದೆ. ಅವುಗಳ ಸಂಕ್ಷಿಪ್ತ ವಿವರಣೆಯನ್ನು ಇಲ್ಲಿ ಕೊಡಲಾಗಿದೆ.

ಅಯ್ಯಾಮುತ್ತಶ್ರೀಕ್: ತಕ್ಬೀರ್ ಹೇಳಲಾಗುವ ದುಲ್‌ಹಜ್ಜ್ ತಿಂಗಳ 9ರಿಂದ 13ರ ವರೆಗಿನ ದಿನಗಳು.

ಅಯ್ಯಾಮುನ್ನಹರ್: ಪ್ರಾಣಿ ಬಲಿಯ ದಿನಗಳು (ದುಲ್‌ಹಜ್ಜ್ 10ರಿಂದ 12)

ಅರಫಾತ್: ಮಕ್ಕಾದಿಂದ ಸುಮಾರು 15ಕಿ.ಮೀ. ಪೂರ್ವ ದಿಕ್ಕಿನಲ್ಲಿರುವ ಬಹುದೊಡ್ಡ ಮೈದಾನ. ಹಜ್ಜ್ ಯಾತ್ರಿಕರು ದುಲ್‌ಹಜ್ಜ್ 9ರಂದು ಅಲ್ಲಿಗೆ ಹೋಗಬೇಕಾದುದು ಕಡ್ಡಾಯ.

ಆಫಾಕೀ: ಮೀಕಾತ್‌ನಿಂದ ಹೊರಗೆ ವಾಸಿಸುವವ.

ಇಫ್ರಾದ್: ಉಮ್ರಾ ಇಲ್ಲದೆ ಕೇವಲ ಹಜ್ಜ್ ಯಾತ್ರೆಯ ಇಹ್ರಾಮ್ ಕಟ್ಟಿ ಹಜ್ಜ್ ನಿರ್ವಹಿಸುವವರು.

ಇಸ್ತಿಲಾಮ್: ಹಜರುಲ್ ಅಸ್ವದನ್ನು ಚುಂಬಿಸುವುದು, ಮುಟ್ಟುವುದು ಅಥವಾ ಅದರತ್ತ ಸನ್ನೆ ಮಾಡುವುದು.

ಇಹ್ರಾಮ್: ಇದರ ಶಬ್ದಾರ್ಥವು 'ಹರಾಮ್‌ಗೊಳಿಸುವುದು' ಎಂದಾಗಿದೆ. ಯಾತ್ರಿಕನು ಹಜ್ಜ್, ಉಮ್ರಾ ಅಥವಾ ಹಜ್ಜ್ ಮತ್ತು ಉಮ್ರಾಗಳೆರಡರ ಸಂಕಲ್ಪ ಮಾಡಿ, ತಲ್ಬಿಯ ಹೇಳಿದಾಗ ಅವನ ಮೇಲೆ ಕೆಲವು ಹಲಾಲ್ ವಿಷಯಗಳೂ ಹರಾಮ್ ಆಗಿ ಬಿಡುತ್ತದೆ. ಆ ಸಂದರ್ಭದಲ್ಲಿ ಧರಿಸುವ ಎರಡು ತುಂಡು ಸಾದಾ ಬಟ್ಟೆಗೆ ಇಹ್ರಾಮ್ ಎನ್ನುತ್ತಾರೆ.

ಇಳ್ತಿಬಾಅ್: ತವಾಫ್ ಮಾಡುವಾಗ ಇಹ್ರಾಮ್‌ನ ಹೊದೆಯುವ ಬಟ್ಟೆಯನ್ನು ಬಲಕಂಕುಳಡಿಯಿಂದ ತಂದು ಸೆರಗನ್ನು ಎಡ ಹೆಗಲ ಮೇಲೆ ಹಾಕಿಕೊಳ್ಳುವುದು.

ಉಮ್ರಾ: 'ಹಿಲ್ಲ್' ಅಥವಾ 'ಮೀಕಾತ್'ನಿಂದ ಇಹ್ರಾಮ್ ಕಟ್ಟಿ ತವಾಫ್ ಮತ್ತು ಸಈ ಮಾಡುವುದು. ಇದನ್ನು 'ಹಜ್ಜ್ ಅಸ್ಗರ್'(ಸಣ್ಣ ಹಜ್ಜ್) ಎನ್ನಲಾಗುತ್ತದೆ.

ಕರ್ನ್: ಇದನ್ನು 'ಕರ್ನುಲ್ ಮನಾಝಿಲ್' ಎಂದೂ ಹೇಳುತ್ತಾರೆ. ಇದೊಂದು ಬೆಟ್ಟ. ಮಕ್ಕಾದಿಂದ 65 ಕಿ.ಮೀ. ದೂರದಲ್ಲಿದ್ದು, ಇದು ನಜ್ದ್‌ನ ಕಡೆಯಿಂದ ಬರುವವರ ಮೀಕಾತ್ ಆಗಿದೆ.

ಕಸ್ರ್ ಅಥವಾ ತಕ್ಸೀರ್: ಕೂದಲನ್ನು ಕತ್ತರಿಸುವುದು.

ಕಾರಿನ್: 'ಹಜ್ಜ್ ಕಿರಾನ್' ಮಾಡುವ ಯಾತ್ರಿಕ.

ಕಿರಾನ್: ಹಜ್ಜ್ ಮತ್ತು ಉಮ್ರಾಗಳೆರಡಕ್ಕೂ ಇಹ್ರಾಮ್ ಒಟ್ಟಿಗೆ ಕಟ್ಟಿ ಮೊದಲು ಉಮ್ರಾ ಮಾಡಿ, ಇಹ್ರಾಮನ್ನು ಬಿಚ್ಚದೆ ಅದೇ ಇಹ್ರಾಮಿನಿಂದ ಹಜ್ಜ್ ಕರ್ಮಗಳನ್ನು ನೆರವೇರಿಸುವುದು.

ಜಝಾಅ್: ಸಣ್ಣ ಪುಟ್ಟ ಲೋಪದೋಷಗಳು ಸಂಭವಿಸಿದುದಕ್ಕಾಗಿ ಕೊಡುವ ಪರಿಹಾರ.

ಜನ್ನತುಲ್ ಮಅ್‌ಲಾ: ಮಕ್ಕಾದ ಕಬರಸ್ತಾನ.

ಜಬಲ್ ಕಝಹ್: ಮುಝ್ದಲಿಫಾದಲ್ಲಿರುವ ಒಂದು ಬೆಟ್ಟ.

**ಜಬಲ್ ನೂರ್:** ಹ. ಮುಹಮ್ಮದ್‌ರು(ಸ) ಪ್ರವಾದಿತ್ವಕ್ಕೆ ಮುಂಚೆ ಧ್ಯಾನಾಸಕ್ತರಾಗಿ ಕುಳಿತ್ತಿದ್ದ ಹಿರಾ ಗುಹೆ ಇರುವ ಪರ್ವತ. ಇದು 'ಮಿನಾ'ಕ್ಕೆ ಹೋಗುವಾಗ ಎಡದಿಕ್ಕಿನಲ್ಲಿ ಕಾಣಸಿಗುತ್ತದೆ.

**ಜಬಲುರ್ರ್‌ಹ್ಮ:** ಅರಫಾತ್ ಮೈದಾನದಲ್ಲಿರುವ ಒಂದು ಬೆಟ್ಟ. ಪ್ರವಾದಿವರ್ಯರು(ಸ) ಇದರ ಮೇಲೆ ನಿಂತೇ 'ಹಜ್ಜತುಲ್ ವದಾ'ದ ಐತಿಹಾಸಿಕ ಉಪನ್ಯಾಸ ಗೈದಿದ್ದರು.

**ಜಬಲುಸ್ಸಬೀರ್:** 'ಮಿನಾ'ದಲ್ಲಿರುವ ಒಂದು ಬೆಟ್ಟದ ಹೆಸರು.

**ಜಬಲ್ ಸೌರ್:** ಪ್ರವಾದಿವರ್ಯರು(ಸ) ಹಿಜ್ರತ್ ಹೋಗುವಾಗ ಮೂರು ರಾತ್ರೆ ತಂಗಿದ್ದ ಸೌರ್ ಗುಹೆ ಇರುವ ಪರ್ವತ. ಇದು ಮಕ್ಕಾದಿಂದ ಐದು ಕಿ.ಮೀ. ದೂರದಲ್ಲಿದೆ.

**ಜಮರಾತ್:** 'ಮಿನಾ'ದಲ್ಲಿ ಮೂರು ಕಡೆ ಆಳೆತ್ತರದ ಸ್ತಂಭಗಳಿದ್ದು ಅವುಗಳ ಬುಡದಲ್ಲಿ ಕಟ್ಟೆ ಕಟ್ಟಲಾಗಿದೆ. ಇವೇ ಜಮರಾತ್. ಹಜ್ಜ್‌ನ ದಿನಗಳಲ್ಲಿ ಅದಕ್ಕೆ ಕಲ್ಲೆಸೆಯಲಾಗುತ್ತದೆ.

**ಜುಹ್‌ಫ:** ಮಕ್ಕಾದಿಂದ ಸುಮಾರು 80 ಕಿ.ಮೀ. ದೂರ ರಾಬಿಗ್ ಎಂಬಲ್ಲಿಗೆ ಸಮೀಪ ಇರುವ ಸ್ಥಳ. ಇದು ಸಿರಿಯಾ ಕಡೆಯಿಂದ ಬರುವವರ ಮೀಕಾತ್.

**ಝಮ್ ಝಮ್:** ಕಅಬಾದ ಸಮೀಪದಲ್ಲೇ ಇರುವ ಒಂದು ಪ್ರಸಿದ್ಧ ಚಿಲುಮೆ. ಇದು ಈಗ ಬಾವಿಯ ರೂಪದಲ್ಲಿದೆ.

**ತಕ್ಬೀರ್:** 'ಅಲ್ಲಾಹು ಅಕ್ಬರ್' ಎನ್ನುವುದು.

**ತಮತ್ತುಅ್:** ಹಜ್ಜ್ ನಿರ್ವಹಣೆಯ ಒಂದು ವಿಧ. ಇದರಲ್ಲಿ ಹಜ್ಜ್‌ನ ತಿಂಗಳುಗಳಲ್ಲಿ ಮೊದಲು ಉಮ್ರಾ ಮಾಡಿ ಇಹ್ರಾಮ್ ಬಿಚ್ಚಲಾಗುತ್ತದೆ. ಅನಂತರ ಬೇರೆ ಇಹ್ರಾಮ್ ಕಟ್ಟಿ ಹಜ್ಜ್ ಯಾತ್ರೆ ಮಾಡಲಾಗುತ್ತದೆ.

**ತಲ್ಬಿಯಾ:** 'ಲಬ್ಬೈಕ್' ಕೊನೆಯ ವರೆಗೆ ಹೇಳುವುದು.

**ತಸ್ಬೀಹ್:** 'ಸುಬ್‌ಹಾನಲ್ಲಾಹ್ ಎಂಬ ಪದಗಳು (ಅರ್ಥಾತ್ ಅಲ್ಲಾಹ್ ಪರಮ ಪಾವನನು)

**ತವಾಫ್:** ನಿರ್ದಿಷ್ಟ ಹಾಗೂ ನಿಶ್ಚಿತ ನಿಯಮಗಳಿಗನುಸಾರ ಕಅಬಾಕ್ಕೆ ಏಳು ಬಾರಿ ಸುತ್ತುಬರುವುದು.

**ತಹ್ಲೀಲ್:** 'ಲಾ ಇಲಾಹ ಇಲ್ಲಲ್ಲಾಹ್' ಎಂಬ ಪದಗಳು (ಅರ್ಥಾತ್ ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ)

**ದಮ್:** ತಮತ್ತುಅ್ ಅಥವಾ ಕಿರಾನ್ ಹಜ್ಜ್ ಯಾತ್ರಿಕನಿಗೆ ಕೃತಜ್ಞತಾರ್ಪಣೆಯಲ್ಲಿ ಮತ್ತು ಅವನಿಂದ ಇಹ್ರಾಮಿನ ಅವಸ್ಥೆಯಲ್ಲಿ ಯಾವುದಾದರೂ ನಿಷಿದ್ಧ ಕಾರ್ಯಗಳು ಸಂಭವಿಸಿಹೋದರೆ ಅದಕ್ಕೆ ಪ್ರಾಯಶ್ಚಿತ್ತವಾಗಿ ಹರಮ್‌ನಲ್ಲಿ ಆಡು, ಕುರಿ ಇತ್ಯಾದಿ ದಿಬ್‌ಹ್ ಮಾಡುವುದು ಕಡ್ಡಾಯವಾಗಿರುತ್ತದೆ. ಇದನ್ನೇ 'ದಮ್'(ಪ್ರಾಣಿಬಲಿ) ಎನ್ನುತ್ತಾರೆ.

ದಾತು ಇರಾಕ್: ಮಕ್ಕಾದಿಂದ ಸುಮಾರು 80 ಕಿ.ಮಿೂ. ದೂರ ಈಶಾನ್ಯ ದಿಕ್ಕಿಗಿರುವ ಒಂದು ಸ್ಥಳ. ಇದು ಇರಾಕ್‌ನ ಕಡೆಗಿರುವವರ ಮಿೂಕಾತ್.

ದುಲ್ ಹುಲೈಫ: ಮದೀನಾದಿಂದ ಮಕ್ಕಾಕ್ಕೆ ಬರುವ ದಾರಿಯಲ್ಲಿ ಮದೀನಾದಿಂದ 8 ಕಿ.ಮಿೂ ದೂರದಲ್ಲಿರುವ ಸ್ಥಳ. ಈಗ ಅದು ಬಿಅ್‌ರ್‌ಅಲೀ ಎಂದು ಪ್ರಸಿದ್ಧವಾಗಿದೆ. ಇದು ಮದೀನಾದವರ ಮಿೂಕಾತ್.

ಬತನ್ ಅರ್ನ: ಅರಫಾತ್‌ನ ಸಮಿೂಪದಲ್ಲಿರುವ ಒಂದು ಜಾಗ. ಇಲ್ಲಿ ವುಕೂಫ್ ಮಾಡುವುದು ಸಿಂಧುವಲ್ಲ. ಏಕೆಂದರೆ ಇದು ಅರಫಾತ್‌ನಿಂದ ಹೊರಗಿದೆ.

ಬುದ್‌ನ: ದೊಡ್ಡ ನಿಯಮೋಲ್ಲಂಘನೆಯ ಪರಿಹಾರಕ್ಕಾಗಿ ಕೊಡಬೇಕಾದ ದೊಡ್ಡ ಪ್ರಾಣಿ(ಒಂಟೆ ಅಥವಾ ಹಸು)ಯ ಬಲಿದಾನ.

ಸಫಾ: ಕಅಬಾದ ಹತ್ತಿರ ಪೂರ್ವದಿಕ್ಕಿಗೆ ಇರುವ ಒಂದು ಬೆಟ್ಟ. ಇಲ್ಲಿಂದ ಸಈ ಆರಂಭವಾಗುತ್ತದೆ.

ಮರ್ವಾ: ಕಅಬಾದ ಈಶಾನ್ಯ ದಿಕ್ಕಿನಲ್ಲಿರುವ ಒಂದು ಬೆಟ್ಟ. ಇಲ್ಲಿ 'ಸಈ' ಕೊನೆಗೊಳಿಸಲಾಗುತ್ತದೆ.

ಮಸ್‌ಅ: ಸಈ ಮಾಡುವ ಸ್ಥಳ (ಸಫಾದಿಂದ ಮರ್ವಾದ ವರೆಗೆ)

ಮಸ್ಜಿದ್ ಖೈಫ್: ಮಿನಾದ ದೊಡ್ಡ ಮಸೀದಿ.

ಮಸ್ಜಿದ್ ನಮಿರ: ಅರಫಾತ್‌ನ ಕಿನಾರೆಯಲ್ಲಿರುವ ಮಸೀದಿ. ಇದನ್ನು ಮಸ್ಜಿದ್ ಇಬ್‌ರಾಹೀಮ್ ಎಂದೂ ಕರೆಯುತ್ತಾರೆ. ದುಲ್‌ಹಜ್ಜ್ 9ರಂದು ಇಲ್ಲಿ ಖುತ್‌ಬಾ ಮತ್ತು ನಮಾಝ್ ಮಾಡಲಾಗುತ್ತದೆ.

ಮಸ್ಜಿದ್ ಮಶ್‌ಅರಿಲ್ ಹರಾಮ್: ಮುಝ್ದಲಿಫಾದ ಒಂದು ಭಾಗ. ಇಲ್ಲೊಂದು ಮಸೀದಿ ಇದೆ. ಇದರ ಸುತ್ತಮುತ್ತ 10ರ ರಾತ್ರಿ ವುಕೂಫ್ ಮಾಡಲಾಗುತ್ತದೆ. ಇದು ಹರಮಿನೊಳಗೆ ಸೇರಿದೆ.

ಮಸ್ಜಿದುಲ್ ಹರಾಮ್: ಕಅಬಾದ ಸುತ್ತಲೂ ನಿರ್ಮಿಸಲ್ಪಟ್ಟಿರುವ ಅತಿ ವಿಶಾಲವಾದ ಜಾಗತಿಕ ಕೇಂದ್ರ ಮಸೀದಿ.

ಮಿನಾ: ಮಕ್ಕಾ ನಗರದ ಪೂರ್ವಕ್ಕೆ ಸುಮಾರು 5 ಕಿ.ಮಿೂ. ದೂರದಲ್ಲಿರುವ ಒಂದು ಊರು. ಇಲ್ಲಿ ಜಮರಾತ್‌ಗೆ ರಮಿೂ ಮಾಡಲಾಗುತ್ತದೆ. ಪ್ರಾಣಿಬಲಿ ಕೊಡಲಾಗುತ್ತದೆ. ಇದು ಹರಮಿನೊಳಗೆ ಇದೆ.

ಮಿೂಕಾತ್: ಮಕ್ಕಾಕ್ಕೆ ಯಾತ್ರಾರ್ಥಿಯಾಗಿ ಬರುವವನು ಇಹ್ರಾಮ್ ಕಟ್ಟಲೇ ಬೇಕಾದ ಧಾರ್ಮಿಕ ಗಡಿ.

ಮಿೂಕಾತೀ: ಮಿೂಕಾತ್‌ನ ನಿವಾಸಿ.

ಮಿೂಝಾಬ್ ರಹ್ಮತ್: ಕಅಬಾದ ಉತ್ತರ ದಿಕ್ಕಿಗಿರುವ ಗೋಡೆಯ ಮೇಲೆ ತಾಗಿಸಿಡಲಾಗಿರುವ ಒಂದು ಸುವರ್ಣ ಹರಿನಾಳಿ. ಕಅಬಾದ ಮೇಲೆ ಬಿದ್ದ ನೀರು ಇದರಲ್ಲಿ ಹರಿದು ಹತೀಮ್‌ನಲ್ಲಿ ಬೀಳುತ್ತದೆ.

ಮಕಾಮು ಇಬ್‌ರಾಹೀಮ್: ಇದೊಂದು ಸ್ವರ್ಗಶಿಲೆ. ಹ. ಇಬ್‌ರಾಹೀಮ್(ಅ)ರು ಇದರ ಮೇಲೆ ನಿಂತು ಕಅಬಾ ಭವನವನ್ನು ಕಟ್ಟಿದ್ದರು.

ಮುಝ್ದಲಿಫಾ: ಮಿನಾ ಮತ್ತು ಅರಫಾತ್‌ಗಳ ನಡುವೆ ಇರುವ ಒಂದು ಮೈದಾನ.

ಮುತಾಫ್: ಕಅಬಾದ ಸುತ್ತಲಿರುವ ವೃತ್ತಾಕಾರದ ಅಂಗಳ. ಇದರಲ್ಲಿ ತವಾಫ್ ಮಾಡಲಾಗುತ್ತದೆ.

ಮುಫ್‌ರಿದ್: ಹಜ್ಜ್ ಯಾತ್ರೆಯನ್ನು ಮಾತ್ರ ಮಾಡುವವ ಅಥವಾ ಇಫ್ರಾದ್ ಹಜ್ಜ್ ಯಾತ್ರಿಕ.

ಮುಲ್ತಝಮ್: ಕಅಬಾದ ದ್ವಾರ ಮತ್ತು ಹಜರುಲ್ ಅಸ್ವದ್‌ಗಳ ನಡುವಿನ ಭಾಗ.

ಮುಹ್ರಿಮ್: ಇಹ್ರಾಮಿನ ಸ್ಥಿತಿಯಲ್ಲಿರುವವ.

ಮುಹಸ್ಸರಃ ಮುಝ್ದಲಿಫಾಕ್ಕೆ ಸೇರಿಕೊಂಡಿರುವ ಒಂದು ಮೈದಾನ.

'ಅಸ್ಹಾಬುಲ್ ಫೀಲ್'(ಆನೆಯವರು)ರ ಮೇಲೆ ಕಲ್ಲಿನ ಮಳೆ ಎರಗಿದುದು ಇಲ್ಲೇ. ಆದುದರಿಂದ ಹಜ್ಜ್ ಯಾತ್ರಿಕರು ಇಲ್ಲಿಂದ ಬೇಗ ಬೇಗನೆ ಸಾಗಿ ಬಿಡುತ್ತಾರೆ.

ಮೈಲೈನ್ ಅಖ್‌ದರೈನ್: ಸಫಾ ಮತ್ತು ಮರ್ವಾ ಬೆಟ್ಟಗಳ ನಡುವೆ ಇದ್ದ ಒಂದು ತಗ್ಗು ಭಾಗದಲ್ಲಿ ಹ. ಹಾಜಿರಾ(ರ) ಓಡಿಕೊಂಡು ಸಾಗಿದ್ದರು. ಇದನ್ನು ಗುರುತಿಸಲಿಕ್ಕಾಗಿ ಅಲ್ಲಿ ಎರಡು ಹಸಿರು ಸ್ತಂಭಗಳನ್ನಿರಿಸಿದ್ದಾರೆ. ರಾತ್ರೆ ಹಸಿರು ಬಣ್ಣದ ಟ್ಯೂಬ್ ಲೈಟ್ ಇಡಲಾಗಿದೆ.

ಮೌಕಿಫ್: ತಂಗುವ ಸ್ಥಳ. ಅರಫಾತ್ ಮತ್ತು ಮುಝ್ದಲಿಫಾ ಇವೆರಡೂ ಮೌಕಿಫ್‌ಗಳಾಗಿವೆ.

ಯಲಮ್‌ಲಮ್: ಮಕ್ಕಾದಿಂದ ಸುಮಾರು 60 ಕಿ.ಮೀ ದಕ್ಷಿಣಕ್ಕಿರುವ ಪರ್ವತ ಭಾಗ. ಈಗ ಅದನ್ನು ಸಅದಿಯ ಎನ್ನುತ್ತಾರೆ. ಇದು ಯಮನಿನ ದಿಕ್ಕಿಗೆ ಇರುವವರ ಮೀಕಾತ್.

ಯೌಮುಲ್ ಅರಫಾ: ದುಲ್ ಹಜ್ಜ್ 9ನೆಯ ದಿನಾಂಕ. ಇದು ಮುಖ್ಯ ಹಜ್ಜ್‌ನ ದಿನ.

ಯೌಮುತ್ತರ್‌ವಿಯ: ದುಲ್‌ಹಜ್ಜ್ 8ನೆಯ ದಿನಾಂಕ. ಅಂದು ಹಜ್ಜ್ ಯಾತ್ರಿಕರು ಮಿನಾದಲ್ಲಿ ಬಂದು ತಂಗುತ್ತಾರೆ.

ರಮ್ಯ್ (ರಮೀ): ಮಿನಾದಲ್ಲಿ ಜಮರಾತ್‌ಗೆ ಕಲ್ಲೆಸೆಯುವುದು.

ರಮ್ಲ್: ತವಾಫ್ ಮಾಡುತ್ತಿರುವಾಗ ಠೀವಿಯ ನಡಿಗೆ.

ರುಕ್ನ್ ಇರಾಕೀ: ಕಅಬಾದ ಈಶಾನ್ಯ ಮೂಲೆ. ಇದು ಇರಾಕಿನ ಕಡೆಗಿದೆ.

ರುಕ್ನ್ ಯಮಾನೀ: ಕಅಬಾದ ನೈಋತ್ಯಮೂಲೆ. ಇದು ಯಮನಿನ ಕಡೆಗಿದೆ.

ರುಕ್ನ್ ಶಾಮೀ: ಕಅಬಾದ ವಾಯುವ್ಯ ಮೂಲೆ. ಇದು ಸಿರಿಯಾದ ಕಡೆಗೆ ಇದೆ.

ವುಕೂಫ್: ಅರಫಾತ್ ಮತ್ತು ಮುಝ್ದಲಿಫಾ ಮೈದಾನಗಳಲ್ಲಿ ನಿಶ್ಚಿತ ಕಾಲಗಳಲ್ಲಿ ತಂಗುವುದು.

**ಶೌತ್:** ಕಅಬಾದ ಸುತ್ತಲೂ ಬರುವ ಒಂದು ಸುತ್ತು. ಏಳು ಸುತ್ತುಗಳು ಒಂದು ತವಾಫ್ ಎನಿಸುತ್ತದೆ.

**ಸಈ:** ಸಫಾ ಮತ್ತು ಮರ್ವಾ ಬೆಟ್ಟಗಳ ನಡುವೆ ನಿರ್ದಿಷ್ಟ ಹಾಗೂ ನಿಶ್ಚಿತ ರೀತಿಯಲ್ಲಿ ಏಳು ಬಾರಿ ಜೋರಾಗಿ ನಡೆಯುವುದು ಅಥವಾ ಓಡಾಡುವುದು.

**ಹಜರುಲ್ ಅಸ್ವದ್:** ಚುಂಬಿಸಬೇಕಾದ ಕರಿಶಿಲೆ. ಇದನ್ನು ಕಅಬಾದ ಪೂರ್ವದ ಮೂಲೆಯಲ್ಲಿ ನೆಲದಿಂದ ಸಮಾರು 1.25ಮೀ. ಎತ್ತರಕ್ಕೆ ಇರಿಸಲಾಗಿದೆ. ಇದಕ್ಕೆ ಬೆಳ್ಳಿಯ ಚೌಕಟ್ಟಿದೆ.

**ಹತೀಮ್:** ಕಅಬಾಕ್ಕೆ ತಾಗಿ ಉತ್ತರಕ್ಕೆ ಅರ್ಧ ವೃತ್ತಾಕಾರದಲ್ಲಿ ಇರುವ ಆಳೆತ್ತರದ ಗೋಡೆಯ ಒಳಭಾಗ. ಇದು ಹಿಂದೆ ಕಅಬಾದ ಭಾಗವೇ ಆಗಿತ್ತು.

**ಹದ್ಯ್:** ಹರಮ್‌ನಲ್ಲಿ ಬಲಿ ಅರ್ಪಿಸಲಿಕ್ಕಾಗಿ ಯಾತ್ರಿಕನು ತನ್ನ ಜೊತೆ ತರುವ ಪ್ರಾಣಿ.

**ಹರಮ್:** ಮಕ್ಕಾ ನಗರದ ಸುತ್ತಮುತ್ತಲೂ ಗುರುತಿಸಲ್ಪಟ್ಟಿರುವ ಗಡಿಯ ವರೆಗಿನ ಭೂಭಾಗ. ವ್ಯಾವಹಾರಿಕವಾಗಿ ಮಸ್ಜಿದುಲ್ ಹರಾಮನ್ನು ಹರಮ್ ಎನ್ನುತ್ತಾರೆ.

**ಹರಮೀ:** ಹರಮ್‌ನೊಳಗೆ ವಾಸಿಸುವವ.

**ಹಲ್ಕ್:** ಕ್ಷೌರ ಮಾಡಿಸುವುದು.

**ಹಿಲ್ಲ್:** ಹರಮ್‌ನ ಗಡಿಯ ಹೊರಗೆ ಮತ್ತು ಮೀಕಾತ್‌ನ ಒಳಗಿರುವ ಭಾಗ. ಹರಮ್‌ನೊಳಗೆ ಹರಾಮ್ ಆಗಿರುವಂತಹ ಕೆಲವು ವಿಷಯಗಳು ಇಲ್ಲಿ ಹಲಾಲ್ ಆಗಿರುತ್ತದೆ.

**ಹಿಲ್ಲೀ:** ಹಿಲ್ಲ್ ಪ್ರದೇಶದ ನಿವಾಸಿ

**ಳಬ್ಬ್:** ಮಿನಾದಲ್ಲಿ ಮಸ್ಜಿದ್ ಖೈಫ್‌ನ ಬಳಿ ಇರುವ ಬೆಟ್ಟ